WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಫೆಬ್ರವರಿ ೯, ೨೦೧೨ (ಮಾಘ ೨೦, ಶಕ ವರ್ಷ ೧೯೩೩) | ಸಂಚಿಕೆ ೬ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಗೆ 2011–12ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2030 (ಯೋಜನೇತರ)ರಲ್ಲಿ ಒದಗಿಸಲಾಗಿರುವ ಅನುದಾನದಲ್ಲಿ ಉಳಿಕೆಯಾಗುವ ಅನುದಾನವನ್ನು ಮರುಹೊಂದಾಣಿಕೆ ಮಾಡಿ ಪುನರ್ ವಿನಿಯೋಗ ಮಾಡುವ ಕುರಿತು – ಆದೇಶ.

**ಓದಲಾಗಿದೆ :**
1. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ರವರ ಪತ್ರ ಸಂಖ್ಯೆ: ಬಿಎಲ್‌ಡಿ 11/2007–08 ದಿನಾಂಕ: 14–09–2011 ಮತ್ತು ಬಿಯುಡಿ 02/2011–12 ದಿನಾಂಕ: 09–11–2011.
2. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 123 ಬಿಆರ್‌ಎಸ್ 2011 ದಿನಾಂಕ: 12–12–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ನೋಂದಣಿ ಮತ್ತು ಮುದ್ರಾಂಕ ಇಲಾಖೆಗೆ 2011–12ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2030–03–001–2–04–051 (ಯೋಜನೇತರ) ಮತ್ತು 2030–03–001–2–04–051 (ಯೋಜನೇತರ)ಗಳಲ್ಲಿ ಒಟ್ಟಾರೆಯಾಗಿ ಒದಗಿಸಿರುವ ಅನುದಾನ ರೂ.2782.10 ಗಳಲ್ಲಿ 2011–12ನೇ ಸಾಲಿಗೆ ಖರ್ಚಾಗದೇ ಉಳಿಕೆಯಾಗುವ ಮೊತ್ತ ರೂ.340.36 ಲಕ್ಷಗಳಲ್ಲಿ ಕಂದಾಯ ಭವನದಲ್ಲಿ ಇಲಾಖೆಯ ಕೇಂದ್ರ ಕಛೇರಿಯ ಒಳ ವಿನ್ಯಾಸ ಕಾಮಗಾರಿ ಕೈಗೊಳ್ಳಲು ಅಂದಾಜಿಸಿರುವ ಮೊತ್ತ ರೂ.192.00 ಲಕ್ಷಗಳು, ಅಧೀನ ಕಛೇರಿಗಳ ಬಾಡಿಗೆ ಕಟ್ಟಡದ ಬಾಡಿಗೆ ಪಾವತಿಸಲು ಬೇಕಾಗಿರುವ ಹೆಚ್ಚುವರಿ ಮೊತ್ತ ರೂ.117.69 ಲಕ್ಷ ಮತ್ತು ಉಪ ನೋಂದಣಿ ಕಛೇರಿ, ಬ್ಯಾಟರಾಯನಪುರಕ್ಕಾಗಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ನಿವೇಶನ ಖರೀದಿಸಲು ಬೇಕಾಗಿರುವ ಮೊತ್ತ ರೂ. 30.67 ಲಕ್ಷಗಳು ಸೇರಿದಂತೆ ಒಟ್ಟು ರೂ. 340.36 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ 2030–03–001–2–04–051 (ಯೋಜನೇತರ) ರಿಂದ ಲೆಕ್ಕ ಶೀರ್ಷಿಕೆ 2030–03–001–1–00–71 (ಯೋಜನೇತರ) ಗೆ ಪುನರ್ ಮರು ಹೊಂದಾಣಿಕೆ ಮಾಡಿಕೊಂಡು ಪುನರ್ ವಿನಿಯೋಗ ಮಾಡಿಕೊಳ್ಳಲು ನಿಗದಿತ ನಮೂನೆ ಕೆ.ಎಫ್.ಸಿ. ಫಾರಂ 22 ಎ ರಡಿಯಲ್ಲಿ ಮಾಹಿತಿಯನ್ನು ಸಿದ್ದಪಡಿಸಿ ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

ಮೇಲೆ ಓದಲಾದ (2) ರಲ್ಲಿ ಆರ್ಥಿಕ ಇಲಾಖೆಯು ನೋಂದಣಿ ಮತ್ತು ಮುದ್ರಾಂಕ ಇಲಾಖೆಯ 2011–12ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 2030 ರಡಿ ರೂ.340.36 ಲಕ್ಷಗಳನ್ನು ಪುನರ್ ವಿನಿಯೋಗಗೊಳಿಸಲು ಆದೇಶ ಹೊರಡಿಸಿ, ಆದೇಶದೊಂದಿಗೆ ಲಗತ್ತಿಸಿರುವ ತಃಖ್ತೆಯಲ್ಲಿ ತಿಳಿಸಿರುವಂತೆ ಅನುದಾನವನ್ನು ಪುನರ್ ವಿನಿಯೋಗಗೊಳಿಸುವಂತೆ ಆದೇಶಿಸಿರುತ್ತದೆ.

ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : 71 ಮುನೋಮು 2011, ಬೆಂಗಳೂರು, ದಿನಾಂಕ : 19ನೇ ಡಿಸೆಂಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2011–12ನೇ ಸಾಲಿನ ಆಯವ್ಯಯದಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಲೆಕ್ಕ ಶೀರ್ಷಿಕೆ 2030–03–001–2–04–051 (ಯೋಜನೇತರ) ರಲ್ಲಿ ಒದಗಿಸಲಾಗಿರುವ ರೂ.2782.10 ಲಕ್ಷಗಳ ಅನುದಾನದಲ್ಲಿ 2011–12ನೇ ಸಾಲಿನಲ್ಲಿ ಖರ್ಚಾಗದೇ ಉಳಿಕೆಯಾಗುವ ಮೊತ್ತ ರೂ. 340.36 ಲಕ್ಷ (ರೂಪಾಯಿ ಮೂರುನೂರ ನಲವತ್ತು ಲಕ್ಷದ ಮೂವತ್ತಾರು ಸಾವಿರಗಳು ಮಾತ್ರ) ಗಳನ್ನು ಕಂದಾಯ ಭವನದಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಗೆ ಹಂಚಿಕೆ ಮಾಡಲಾಗಿರುವ ಜಾಗದಲ್ಲಿ ಇಲಾಖೆಯ ಕೇಂದ್ರ ಕಛೇರಿಯ ಒಳವಿನ್ಯಾಸ ಕಾಮಗಾರಿ ಕೈಗೊಳ್ಳಲು, ಉಪ ನೋಂದಣಿ ಕಛೇರಿಗಳಿಗೆ ಬಾಡಿಗೆ ಪಾವತಿಸಲು ಮತ್ತು ಬ್ಯಾಟರಾಯನಪುರ ಉಪ ನೋಂದಣಿ ಕಛೇರಿಗೆ ನಿವೇಶನ

ಖರೀದಿಸಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ನಿವೇಶನದ ಬೆಲೆ ಪಾವತಿಸಲು ಲೆಕ್ಕ ಶೀರ್ಷಿಕೆ 2030–03–001–1–00–071 (ಯೋಜನೇತರ)ಗೆ ಮರುಹೊಂದಾಣಿಕೆಗೊಳಿಸಿ ಈ ಆದೇಶದೊಂದಿಗೆ ಲಗತ್ತಿಸಿರುವ ತಃಖ್ತೆಯಲ್ಲಿ ತಿಳಿಸಿರುವಂತೆ ಪುನರ್ ವಿನಿಯೋಗಗೊಳಿಸಲು ಆದೇಶಿಸಿದೆ.

ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಅಧೀನ ಕಛೇರಿಗಳ ಬಾಡಿಗೆ ಕಟ್ಟಡದ ಬಾಡಿಗೆಯನ್ನು ಲೋಕೋಪಯೋಗಿ ಇಲಾಖೆಯು ನಿಯಮಾನುಸಾರ ನಿಗದಿಪಡಿಸಿರತಕ್ಕದೆಂದು ಷರತ್ತನ್ನು ವಿಧಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣೆ ಸಂಖ್ಯೆ: ಎಫ್‌ಡಿ 1039 ವೆಚ್ಚ–7/2011 ದಿನಾಂಕ: 14–12–2011 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**K.F.C. FORM 22-A (ART-308)**

**REAPPROPRIATION STATEMENTS TO ACCOMPANY ALL APPLICATIONS OR SANCTION TO EXPENDITURE NOT PROVIDED FOR IN THE BUDGET OR FOR ADDITIONAL ALLOTMENTS**

(Rs. In lakhs)

| | Heads of estimate proposed to be increased | | | | Heads of estimate proposed to be reduced | | | | |
|---|---|---|---|---|---|---|---|---|---|
| Major, minor sub & Detailed Heads of Budget (The same details must be given as in the printed Budget Estimate) | Amount as in the sanctioned Budget Estimates 2011-12 | Actual Expenditure up-to-date | Porbable Expenditure during remainder of the year 2011-12 | Amount of Additional Allotment required 2011-12 | Amount as in the sanctioned Budget Estimates 2011-12 | Actual Expenditure up-to-date | Probable Expenditure during remainder of the year 2011-12 | Amount available for reappropriation 2011-12 | Remarks (Here state fully the reasons for exceeding the allot. And for anticipating savings |
| 1 | 2 | 3 | 4 | 5 | 6 | 7 | 8 | 9 | 10 |
| 2030-03-001-1-00-071 (Building Expenses) (Non Plan) | 242.15 | 161.42 | 421.09 | 340.36 | | | | | Partition and furnishing work of office of IGR at Kandhaya Bhavan and rent expenses of Sub registrar offices and for payment to BDA for cost of site allotted for Byatarayanapura Sub-registrar office. |
| 2030-03-001-2-04-051 (Charges of Supply of Registrered Document) (Non Plan) | | | | | 2782.10 | 1063.04 | 1378.70 | 340.36 | Savings is on account less expenditure than anticipated. |
| **Total** | **242.15** | **161.42** | **421.09** | **340.36** | **2782.10** | **1063.04** | **1378.70** | **340.36** | |

**C.SHAMA RAO**

Deputy Secretary to Government,

Finance Department, (FR & BCC)

ಪಿ.ಆರ್. 118

## ಕಂದಾಯ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ ಗುಲ್ಬರ್ಗಾ ಉತ್ತರ ವಿಧಾನಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ : ಕಂಇ 78 ಮುಸರ 2009, ದಿನಾಂಕ : 25-2-2009.

**ಪ್ರಸ್ತಾವನೆ :**

ಮೇಲೆ ಓದಲಾದ ಆದೇಶದಲ್ಲಿ ಗುಲ್ಬರ್ಗಾ ಜಿಲ್ಲೆಯ ಗುಲ್ಬರ್ಗಾ ಉತ್ತರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡವರೊಂದಿಗೆ ರಚಿಸಲು ಆದೇಶಿಸಲಾಗಿತ್ತು.

| | |
|---|---|
| 1) ಮಾನ್ಯ ವಿಧಾನಸಭಾ ಸದಸ್ಯರು, ಗುಲ್ಬರ್ಗಾ ಉತ್ತರ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2) ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಗುಲ್ಬರ್ಗಾ ಜಿಲ್ಲೆ | ಸದಸ್ಯರು |
| 3) ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಗುಲ್ಬರ್ಗಾ ತಾಲ್ಲೂಕು, ಗುಲ್ಬರ್ಗಾ | ಸದಸ್ಯರು |
| 4) ತಹಶೀಲ್ದಾರ್, ಗುಲ್ಬರ್ಗಾ ತಾಲ್ಲೂಕು, ಗುಲ್ಬರ್ಗಾ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ನಾಲ್ಕು ಅಧಿಕಾರೇತರ ಸದಸ್ಯರನ್ನು ನಂತರ ನಾಮ ನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 55 ಮುಸರ 2011, ಬೆಂಗಳೂರು, ದಿನಾಂಕ : 22ನೇ ಡಿಸೆಂಬರ್, 2011**

ಗುಲ್ಬರ್ಗಾ ಜಿಲ್ಲೆಯ ಗುಲ್ಬರ್ಗಾ ಉತ್ತರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡಂತೆ ಅಧಿಕಾರೇತರ ಸದಸ್ಯರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರಮ ಸಂ. | ಹೆಸರು/ವಿಳಾಸ | ಪ್ರವರ್ಗ |
|---|---|---|
| 1 | ಶ್ರೀಮತಿ ಸುವರ್ಣ ರಾಯಕೋಡ, ಲಕ್ಷ್ಮೀಗುಡಿ ಹತ್ತಿರ, ಶಿವಾಜಿನಗರ, ಗುಲ್ಬರ್ಗಾ | ಸಾಮಾನ್ಯ |
| 2 | ಶ್ರೀಮತಿ ಚಂದ್ರಕಲಾ ಹುಲಸಗೂಡ, ಕೋಂ ಅಶ್ವಥನಾರಾಯಣ ಹುಲಸಗೂಡ, ಮನೆ ನಂ. 4-601/78ಬಿ/1, ಎಂ.ಬಿ. ನಗರ, ಹೊಸಬಡಾವಣೆ, ಗುಲ್ಬರ್ಗಾ | ಮಹಿಳೆ |
| 3 | ಶ್ರೀ ಶಾಂತಪ್ಪ ಕುಸುಮೂರ್ತಿ, ರಾಜೀವಗಾಂಧಿನಗರ, ಗುಲ್ಬರ್ಗಾ | ಪರಿಶಿಷ್ಟ ಜಾತಿ |
| 4 | ಶ್ರೀ ಶ್ಯಾಮ ಬಾಬುರಾವ ಪಳಸೆ ಬಂಬುಬಜಾರ, ಫೀಲ್ಟರ್ ಬೆಡ್ ರೋಡ, ಗುಲ್ಬರ್ಗಾ | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 3-2-2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 119 ಕಂದಾಯ ಇಲಾಖೆ (ಮುಜರಾಯಿ).

## ಕಂದಾಯ ಸಚಿವಾಲಯ

**ವಿಷಯ :** ಗದಗ ಜಿಲ್ಲೆ, ಶಿರಹಟ್ಟಿ ತಾಲ್ಲೂಕ, ಗೊಜನೂರ ಗ್ರಾಮದ ರಿ.ಸ. ನಂ. 214/1 ರಲ್ಲಿ 16.31 ಎಕರೆ ಹಾಗೂ 215 ರಲ್ಲಿ 4-00 ಎಕರೆ ಒಟ್ಟು 20-31 ಎಕರೆ ಜಮೀನನ್ನು ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸಲು ಮೆ॥ ಮೈಸೂರು ಮರ್ಕಂಟೈಲ್ ಕಂಪನಿ ಲಿಮಿಟೆಡ್, ಬೆಂಗಳೂರು ಇವರಿಗೆ ಗುತ್ತಿಗೆ ಆಧಾರದ ಮೇಲೆ ಜಮೀನು ಮಂಜೂರು ಮಾಡುವ ಕುರಿತು.

**ಓದಲಾಗಿದೆ :** 1. ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರ ಪತ್ರ ಸಂಖ್ಯೆ : ಪ್ರಾಆಬೆ : ಭೂಮಿ : IV : ಎಲ್‌ಜಿಎಲ್/ಸಿಆರ್-09/2009-10, ದಿನಾಂಕ : 5-9-2009.

**2.** ಸರ್ಕಾರದ ಸುತ್ತೋಲೆ ಸಂಖ್ಯೆ : ಆರ್‌ಡಿ : 78 : ಎಲ್‌ಜಿಪಿ 2009, ದಿನಾಂಕ : 4-1-2011.

**ಪ್ರಸ್ತಾವನೆ :**

ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ರವರ ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಪತ್ರ ದಿನಾಂಕ: 5-9-2009ರಲ್ಲಿ ಗದಗ ಜಿಲ್ಲೆ ಶಿರಹಟ್ಟಿ ತಾಲ್ಲೂಕ್, ಗೊಜನೂರು ಗ್ರಾಮದ ಸ.ನಂ. 214/1 ರಲ್ಲಿ 16-31 ಗುಂಟೆ ಹಾಗೂ ಸ.ನಂ. 215 ರಲ್ಲಿ 4-00 ಎಕರೆ ಒಟ್ಟು 20-31 ಗುಂಟೆ ಜಮೀನನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರಿಗೆ ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದನಾ ಉದ್ದೇಶಕ್ಕಾಗಿ 30 ವರ್ಷಗಳ ಅವಧಿಗೆ ಗುತ್ತಿಗೆ ನೀಡಲು ಗದಗ ಜಿಲ್ಲೆ, ಶಿರಹಟ್ಟಿ ತಾಲ್ಲೂಕಿನ, ಗೊಜನೂರು ಗ್ರಾಮದ ರಿ.ಸ.ನಂ. 214 ರಲ್ಲಿ 219 ಎಕರೆ 21 ಗುಂಟೆ ಹಾಗೂ ರಿ.ಸ.ನಂ. 215 ರಲ್ಲಿ 33 ಎಕರೆ 01 ಗುಂಟೆ ಜಮೀನಿದ್ದು, ಈ ಜಮೀನು ಮುಫತ್ ಗಾಯರಾಣ ಜಮೀನು ಎಂದು ವರ್ಗೀಕೃವಾಗಿರುತ್ತದೆ. ಸದರಿ ಜಮೀನಿನಲ್ಲಿ ಈಗಾಗಲೇ ಸಾರ್ವಜನಿಕ ಶಿಕ್ಷಣ ಇಲಾಖೆಗೆ 5-00 ಎಕರೆ ಹಾಗೂ ಆಶ್ರಯ ಯೋಜನೆಗಾಗಿ 7-00 ಎಕರೆ ಜಮೀನು ಮಂಜೂರು ಮಾಡಿದ್ದು ಇದರಲ್ಲಿ 240 ಎಕರೆ 27 ಗುಂಟೆ ಬಾಕಿ ಇರುತ್ತದೆ. ಸದರಿ ಗ್ರಾಮದಲ್ಲಿ 852 ಜಾನುವಾರುಗಳಿದ್ದು 132 ಎಕರೆ ಜಮೀನಿನ ಅವಶ್ಯಕತೆ ಇದ್ದು 108 ಎಕರೆ 22 ಗುಂಟೆ ಜಮೀನು ಹೆಚ್ಚಿಗೆ ಉಳಿದಿರುತ್ತದೆ. ಈ ಬಾಕಿ ವಿಸ್ತೀರ್ಣದಲ್ಲಿ 20 ಎಕರೆ 31 ಗುಂಟೆ ಜಮೀನನ್ನು

ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸಲು ಕ್ರೆಡಲ್ ಮುಖಾಂತರ ಮೆ॥ ಮೈಸೂರು ಮರ್ಕೆಂಟೈಲ್ ಕಂಪನಿ ಲಿಮಿಟೆಡ್ ಇವರಿಗೆ ಮಂಜೂರು ಮಾಡಲು ಪ್ರಸ್ತಾಪಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಕಂದಾಯ ಇಲಾಖೆಯ ಸುತ್ತೋಲೆಯಲ್ಲಿ ದಿನಾಂಕ : 4–1–2011ರಲ್ಲಿ ಇಂಧನ ಇಲಾಖೆಯ ಕೋರಿಕೆಯಂತೆ ಇನ್ನು ಮುಂದೆ ಸರ್ಕಾರಿ ಜಮೀನುಗಳನ್ನು ಗುತ್ತಿಗೆ ಆಧಾರದ ಮೇಲೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರಿಗೆ ಮಂಜೂರು ಮಾಡುವ ಬದಲಾಗಿ ಯೋಜನೆ ಕೈಗೊಳ್ಳುವ ಸಂಸ್ಥೆಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲು ನಿರ್ಣಯಿಸಲಾಗಿರುತ್ತದೆ.

ಪ್ರಾದೇಶಿಕ ಆಯುಕ್ತರು ಬೆಳಗಾವಿ ವಿಭಾಗ, ಬೆಳಗಾವಿ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 84 ಎಲ್‌ಜಿಡಿ 2009, ಬೆಂಗಳೂರು, ದಿನಾಂಕ : 22–12–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗದಗ ಜಿಲ್ಲೆ, ಶಿರಹಟ್ಟಿ ತಾಲ್ಲೂಕ, ಗೊಜನೂರು ಗ್ರಾಮದ ಸ.ನಂ. 214/1 ರಲ್ಲಿ 16–31 ಗುಂಟೆ ಹಾಗೂ ಸ.ನಂ. 215 ರಲ್ಲಿ 4–00 ಎಕರೆ ಒಟ್ಟು 20–31 ಗುಂಟೆ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 97(4) ರಡಿಯಲ್ಲಿನ ಅವಕಾಶದಂತೆ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ ಸದರಿ 20–31 ಗುಂಟೆ ಜಮೀನನ್ನು ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸಲು ಪ್ರಚಲಿತ ಮಾರುಕಟ್ಟೆ ದರದ ಶೇ. 10 ರಷ್ಟು ಗುತ್ತಿಗೆ ದರ ನಿಗದಿಪಡಿಸಿ ಪ್ರತಿ ಎರಡು ವರ್ಷಗಳಿಗೊಮ್ಮೆ ಗುತ್ತಿಗೆ ದರವನ್ನು ಶೇ. 10 ರಷ್ಟು ಹೆಚ್ಚಿಸುವ ಷರತ್ತಿಗೊಳಪಟ್ಟು, 30 ವರ್ಷಗಳ ಗುತ್ತಿಗೆ ಅವಧಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19(1) ರನ್ವಯ ಮೆ॥ ಮೈಸೂರು ಮರ್ಕೆಂಟೈಲ್ ಕಂಪನಿ ಲಿಮಿಟೆಡ್, ಬೆಂಗಳೂರು ಇವರಿಗೆ ಗುತ್ತಿಗೆ ನೀಡಲು ಸರ್ಕಾರದ ಪೂರ್ವಾನುಮೋದನೆ ನೀಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 732 ವೆಚ್ಚ–7/2011, ದಿನಾಂಕ : 8–9–2011 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಜೆ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–3)

ಪಿ.ಆರ್. 120

## ಕಂದಾಯ ಸಚಿವಾಲಯ

**ವಿಷಯ :** ಹೇಮಾವತಿ ಹಾಗೂ ಯಗಚಿ ಯೋಜನೆಗಳಲ್ಲಿ ಶೀತಪೀಡಿತವೆಂದು ಪರಿಗಣಿಸಿ ಸ್ಥಳಾಂತರಗೊಳಿಸಲು ಗುರುತಿಸಲಾಗಿದ್ದ ಗ್ರಾಮಗಳು ಉನ್ನತ ಮಟ್ಟದ ಸಮಿತಿಯ ಶಿಫಾರಸ್ಸಿನಂತೆ, ಶೀತಪೀಡಿತವಾಗಿಲ್ಲವೆಂದು ಅವುಗಳನ್ನು ಸ್ಥಳಾಂತರ ಪಟ್ಟಿಯಿಂದ ಕೈಬಿಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂ. ಆರ್.ಡಿ. 120 ಆರ್‌ಇಹೆಚ್ 92(ಭಾಗ), ದಿನಾಂಕ : 15–4–1999
2. ಸರ್ಕಾರದ ಆದೇಶ ಸಂ. ಕಂಇ 215 ಆರ್.ಇ.ಹೆಚ್. 2008, ದಿನಾಂಕ : 11–12–2008.
3. ಹೇಮಾವತಿ ಮತ್ತು ಯಗಚಿ ಯೋಜನೆಗಳಲ್ಲಿ ಶೀತಪೀಡಿತವಾಗಿರುವ ಗ್ರಾಮಗಳನ್ನು ಗುರುತಿಸಿ ಸ್ಥಳಾಂತರಿಸಲು ಶಿಫಾರಸ್ಸು ಮಾಡುವ ಬಗ್ಗೆ ರಚಿಸಿರುವ ಉನ್ನತ ಮಟ್ಟದ ಸಮಿತಿಯ ದಿನಾಂಕ : 20–9–2011 ರಂದು ಜರುಗಿದ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಹೇಮಾವತಿ ಮತ್ತು ಯಗಚಿ ಯೋಜನೆಗಳಡಿಯಲ್ಲಿ ಶೀತಪೀಡಿತವಾಗಿರುವುದೆಂದು ಹೇಳಲಾದ ಹಲವು ಗ್ರಾಮಗಳನ್ನು ಗುರುತಿಸಿ ಸ್ಥಳಾಂತರಿಸಲು ಆದೇಶಿಸಲಾಗಿದೆ. ಹೇಮಾವತಿ ಮತ್ತು ಯಗಚಿ ಯೋಜನೆಗಳು ಪೂರ್ಣಗೊಂಡು ಹಲವು ವರ್ಷಗಳಾದರೂ ಗ್ರಾಮಗಳು ಇನ್ನು ಶೀತಪೀಡಿತವಾಗಿವೆಯೆಂದು ಅವುಗಳನ್ನು ಸ್ಥಳಾಂತರಿಸಬೇಕೆಂದು ಕೋರಿಕೆಗಳು ಬಂದಿರುತ್ತವೆ. ಈ ಹಿನ್ನೆಲೆಯಲ್ಲಿ, ಹೇಮಾವತಿ ಮತ್ತು ಯಗಚಿ ಯೋಜನೆಯಡಿಯಲ್ಲಿ ಶೀತಪೀಡಿತವಾರುವುದೆಂದು ಹೇಳಲಾಗಿರುವ ಗ್ರಾಮಗಳ ಸ್ಥಳ ತನಿಖೆ ಕೈಗೊಂಡು ಶೀತಪೀಡಿತವಾಗುವುದನ್ನು ತಡೆಗಟ್ಟಲು ತಾಂತ್ರಿಕವಾಗಿ ಸಾಧ್ಯವಿಲ್ಲವೇ ಎಂಬ ಬಗ್ಗೆ ಹಾಗೂ ಶೀತಪೀಡಿತವಾಗುವುದನ್ನು ತಡೆಗಟ್ಟಲು ಸಾಧ್ಯವಿಲ್ಲದಿದ್ದಲ್ಲಿ ಗ್ರಾಮ ಸ್ಥಳಾಂತರಕ್ಕೆ ಶಿಫಾರಸ್ಸು ಮಾಡಲು ಪ್ರಾದೇಶಿಕ ಆಯುಕ್ತರು, ಮೈಸೂರು ಇವರ ಅಧ್ಯಕ್ಷತೆಯಲ್ಲಿ ಉನ್ನತ ಮಟ್ಟದ ಸಮಿತಿಯನ್ನು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ರಚಿಸಲಾಗಿದೆ. ಈ ಸಮಿತಿಯು ಗ್ರಾಮ ಸ್ಥಳಾಂತರಕ್ಕೆ ಈಗಾಗಲೇ ಆದೇಸವಾಗಿರುವ ಹಾಗೂ ಭೂಸ್ವಾಧೀನ ಪ್ರಕ್ರಿಯೆ ಪೂರ್ಣಗೊಳ್ಳದಿರುವ ಗ್ರಾಮಗಳನ್ನು ಮತ್ತು ಹೊಸದಾಗಿ ಸ್ಥಳಾಂತರಕ್ಕೆ ಬೇಡಿಕೆ ಬಂದಿರುವ ಗ್ರಾಮಗಳನ್ನು ಸಹಾ ಸ್ಥಳ ತನಿಖೆ ಮಾಡಿ ವರದಿ ನೀಡಲು ತಿಳಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ನಡವಳಿಯಂತೆ, ಪ್ರಾದೇಶಿಕ ಆಯುಕ್ತರು, ಮೈಸೂರು ಇವರು ದಿನಾಂಕ : 20–9–2011 ರಂದು ಉನ್ನತಮಟ್ಟದ ಸಮಿತಿಯ ಸಭೆ ನಡೆಸಿ ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕು ಕಟ್ಟೆಬೆಳಗುಲಿ ಹಾಗೂ ಕಟ್ಟೆಬೆಳಗುಲಿ ಕೊಪ್ಪಲು ಗ್ರಾಮಗಳು ಶೀತಪೀಡಿತವಾಗಿರುವುದಿಲ್ಲ ಹಾಗೂ ಇದನ್ನು ಸ್ಥಳಾಂತರಿಸುವ ಅವಶ್ಯಕತೆಯಿಲ್ಲ ಎಂದು ಶಿಫಾರಸ್ಸು ಮಾಡಿರುತ್ತದೆ.

ಮೇಲೆ ತಿಳಿಸಿರುವ ವಿವರಗಳ ಪ್ರಕಾರ ಮೈಸೂರು ಪ್ರಾದೇಶಿಕ ಆಯುಕ್ತರ ಅಧ್ಯಕ್ಷತೆಯಲ್ಲಿನ ಉನ್ನತಮಟ್ಟದ ಸಮಿತಿ ಶಿಫಾರಸ್ಸಿನಂತೆ ಕಟ್ಟೆಬೆಳಗುಲಿ, ಕಟ್ಟೆಬೆಳಗುಲಿಕೊಪ್ಪಲು ಗ್ರಾಮಗಳು ಶೀತಪೀಡಿತವಾಗಿರುವುದಿಲ್ಲ. ಈ 02 ಗ್ರಾಮಗಳಲ್ಲಿ ಕೈಗೊಳ್ಳಲಾಗಿದ್ದ ಭೂಸ್ವಾಧೀನ ಪ್ರಕ್ರಿಯೆ ಭೂಸ್ವಾಧೀನ ಕಾಯ್ದೆ ಕಲಂ 6(1)ರ ಅಧಿಸೂಚನೆ ನಂತರ ಅವಾರ್ಡ್ ಅನುಮೋದನೆಯಾಗದೆ ಅಸಿಂಧುಗೊಂಡಿರುತ್ತವೆ. ಈ ಪೈಕಿ ಕಟ್ಟೆಬೆಳಗುಲಿ ಕೊಪ್ಪಲು ಗ್ರಾಮಸ್ಥರು ರಿಟ್ ಅರ್ಜಿ ಸಂ. 18165–320/2010 ರಂತೆ ಮೊಕದ್ದಮೆ ದಾಖಲಿಸಿದ್ದು, ಉಚ್ಚ ನ್ಯಾಯಾಲಯವು ದಿನಾಂಕ : 15–7–2010ರಂದು ತೀರ್ಪು ನೀಡಿರುತ್ತದೆ. ಈ ತೀರ್ಪಿನ ಮೇಲೆ ಸರ್ಕಾರವು ಮೇಲ್ಮನವಿ ಸಲ್ಲಿಸಿರುತ್ತದೆ.

ಉನ್ನತಮಟ್ಟದ ಸಮಿತಿಯ ವರದಿಯ ಪ್ರಕಾರ ಮೇಲೆ ತಿಳಿಸಿದ 02 ಗ್ರಾಮಗಳು ಶೀತಪೀಡಿತವಾಗಿಲ್ಲದಿರುವುದರಿಂದ ಹಾಗೂ ಶೀತಪೀಡಿತವಾಗುವುದನ್ನು ತಾಂತ್ರಿಕವಾಗಿ ತಡೆಗಟ್ಟಲು ಸಾಧ್ಯವಿರುವುದರಿಂದ ಈ ಗ್ರಾಮಗಳ ಸ್ಥಳಾಂತರವನ್ನು ಕೈಬಿಡಲು ನಿರ್ಧರಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 01 ಭೂಸ್ವಾಹ 2011, ಬೆಂಗಳೂರು, ದಿನಾಂಕ : 21–12–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಮೈಸೂರು ಪ್ರಾದೇಶಿಕ ಆಯುಕ್ತರ ಅಧ್ಯಕ್ಷತೆಯಲ್ಲಿನ ಉನ್ನತಾಧಿಕಾರ ಸಮಿತಿಯು ನೀಡಿದ ಶಿಫಾರಸ್ಸನ್ನು ಒಪ್ಪಿ ಸರ್ಕಾರದ ಆದೇಶ ಸಂಖ್ಯೆ : ಕಂಇ 120 ಆರ್‌ಇಹೆಚ್ 92 (ಭಾಗ) ದಿನಾಂಕ : 15–4–1999 ರನ್ವಯ ಹೇಮಾವತಿ ಹಾಗೂ ಯಗಚಿ ಯೋಜನೆಗಳಡಿಯಲ್ಲಿ ಬರುವಂತಹ ಈ ಕೆಳಕಂಡ ಗ್ರಾಮಗಳು ಶೀತಪೀಡಿತವಾಗಿಲ್ಲದಿರುವುದರಿಂದ ಅವುಗಳನ್ನು ಸ್ಥಳಾಂತರಿಸುವ ಅಗತ್ಯವಿಲ್ಲವೆಂದು ತೀರ್ಮಾನಿಸಿ ಆದೇಶಿಸಿದೆ.

1. ಕಟ್ಟೆಬೆಳಗುಲಿ
2. ಕಟ್ಟೆಬೆಳಗುಲಿಕೊಪ್ಪಲು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ವೆಂಕಟೇಶಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಸ್ವಾಧೀನ 1&3).

ಪಿ.ಆರ್. 121

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀಮತಿ ಹೆಚ್.ಎಸ್. ಕಮಲಮ್ಮ, ವಾಣಿಜ್ಯ ತೆರಿಗೆ ಅಧಿಕಾರಿ ಮತ್ತು ಶ್ರೀ ಎಸ್.ಬಿ. ನೆಲಗೋಲ್, ವಾಣಿಜ್ಯ ತೆರಿಗೆ ಪರಿವೀಕ್ಷಕ, ಇವರ ವಿರುದ್ಧ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದ ಅಂತಿಮ ಆದೇಶ–ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂ. ಆಇ 188 ವಾತೆಸಿ 98, ದಿನಾಂಕ : 12–1–1999.
2. ದಿನಾಂಕ : 16–7–1999ರ ಆಯುಕ್ತರ ಪತ್ರ ಸಂಖ್ಯೆ : ವಿಸಿಆರ್/ಜಿಎಜಡ್/ಸಿಆರ್–7/ 98–99.
3. ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ : ಉಪ ಲೋಕ್/ಬಿಜಿಎಂ–98–99/ಎಆರ್‌ಇ–4, ದಿನಾಂಕ : 5–2–2002.
4. ಸರ್ಕಾರಿ ಆದೇಶ ಸಂಖ್ಯೆ : ಆಇ 188 ವಾತೆತ 1998, ದಿನಾಂಕ : 1–7–2002.
5. ಸರ್ಕಾರದ 2ನೇ ಕಾರಣ ಕೇಳುವ ನೋಟೀಸು ಸಂಖ್ಯೆ : ಆಇ 188 ವಾತೆತ 1998, ದಿನಾಂಕ : 9–11–2010.
6. ಅಪರ ಪೊಲೀಸ್ ನಿಬಂಧಕರು, ವಿಚಾರಣೆ–3, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ : ಲೋಕ್/ಆರ್‌ಇ/ಇಎನ್‌ಕ್ಯೂ–1/2008–09, ದಿನಾಂಕ : 25–6–2010.
7. ಶ್ರೀಮತಿ ಹೆಚ್.ಎಸ್. ಕಮಲಮ್ಮ, ಇವರ ಸಮಜಾಯಿಷಿ ದಿನಾಂಕ : 4–12–2010.

**ಪ್ರಸ್ತಾವನೆ :**

ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಇವರ ಪತ್ರ ದಿನಾಂಕ : 11–6–1999 ರಲ್ಲಿ ಕರ್ನಾಟಕ ಉಪ ಲೋಕಾಯುಕ್ತರ ತನಿಖಾ ವರದಿಯನ್ನು ಕಳುಹಿಸಿದ್ದು, ಸದರಿ ವರದಿಯಲ್ಲಿ ಶ್ರೀಮತಿ ಹೆಚ್.ಎಸ್. ಕಮಲಮ್ಮ, ವಾಣಿಜ್ಯ ತೆರಿಗೆ ಅಧಿಕಾರಿ, ಮತ್ತು ಎಸ್.ಬಿ. ನೆಲಗೋಲ್, ವಾಣಿಜ್ಯ ತೆರಿಗೆ ಪರಿವೀಕ್ಷಕ, ಇವರ ವಿರುದ್ಧ ಫಿರ್ಯಾದುದಾರರಾದ ಶ್ರೀ ದುರ್ಗಪ್ಪ ಸವಣೂರ, ಮಹಾಲಕ್ಷ್ಮೀ ಸ್ವೀಟ್ ಘಟಕದ ರಿಜಿಸ್ಟ್ರೇಷನ್ ಕ್ಯಾನ್ಸಲ್ ಮಾಡಿ ಎನ್.ಎಸ್.ಸಿ. ಸರ್ಟಿಫಿಕೇಟ್‌ಗಳನ್ನು ಮರಳಿ ಕೊಡಲು ಆರೋಪಿ ಅಧಿಕಾರಿಯವರು ರೂ. 500/– ಲಂಚದ ಹಣಕ್ಕೆ ಬೇಡಿಗೆ ಇಟ್ಟಿದ್ದು, ಫಿರ್ಯಾದುದಾರರಿಗೆ ಲಂಚ ಕೊಡಲು ಇಷ್ಟವಿಲ್ಲದಿದ್ದರಿಂದ ದಿನಾಂಕ : 23–3–1998 ರಂದು ಧಾರವಾಡ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ : 5/98 ನ್ನು ದಾಖಲಿಸಿರುತ್ತಾರೆ. ಫಿರ್ಯಾದುದಾರರಿಂದ ರೂ. 500/– ಹಾಗೂ ರೂ. 200/– ಗಳ ಅಕ್ರಮ ಸಂಭಾವನೆ ಪಡೆಯುತ್ತಿದ್ದಾಗ ಲೋಕಾಯುಕ್ತ ಪೊಲೀಸರ ಜಾಲಕ್ಕೆ ಸಿಲುಕಿದ್ದರ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ : (1) ರ ದಿನಾಂಕ : 12–1–1999ರ ಆದೇಶದಲ್ಲಿ ಅಮಾನತ್ತುಗೊಳಿಸಲಾಗಿತ್ತು.

ಅನಂತರ ಮೇಲೆ ಓದಲಾದ ಕ್ರಮ ಸಂಖ್ಯೆ : (2)ರ ಆಯುಕ್ತರ ಪತ್ರದಲ್ಲಿ ಸದರಿ ಅಧಿಕಾರಿ ಮತ್ತು ನೌಕರರ ಅಮಾನತ್ತನ್ನು ತೆರವುಗೊಳಿಸಿ ಸೇವೆಗೆ ಪುನರ್ ಸ್ಥಾಪಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (3)ರ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಹಾಗೂ ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿ ಸದರಿ ಅಧಿಕಾರಿಗಳ ವಿರುದ್ಧ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 14–ಎ ರನ್ವಯ ಇಲಾಖಾ ವಿಚಾರಣೆ ಹಾಗೂ ಕ್ರಿಮಿನಲ್ ಮೊಕದ್ದಮೆ ಎರಡನ್ನೂ ಆದೇಶಿಸಲಾಗಿತ್ತು. ದಿನಾಂಕ : 1–10–2005ರ ಸೆಷನ್ಸ್ ನ್ಯಾಯಾಲಯ, ಹಾವೇರಿ, ಸ್ಪೆಷಲ್ ಕೇಸ್ ನಂ. 19/2001ರ ತೀರ್ಪಿನಲ್ಲಿ, ಕ್ರಿಮಿನಲ್ ಮೊಕದ್ದಮೆಯಲ್ಲಿ ಇವರುಗಳನ್ನು ನಿರ್ದೋಷಿಗಳೆಂದು ಘೋಷಿಸಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ : (5) ದಿನಾಂಕ : 9–11–2010ರ ಮತ್ತು ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ಸಮಜಾಯಿಷಿಯಲ್ಲಿ ಇಲಾಖಾ ವಿಚಾರಣಾ ಸಮಯದಲ್ಲಿ ಆರೋಪಿತ ನೌಕರರುಗಳು ಫಿರ್ಯಾದುದಾರರಿಂದ ತಾವು ಯಾವುದೇ ಅಕ್ರಮ ಸಂಭಾವನೆ ಹಣವನ್ನು ಕೇಳಿರುವುದಿಲ್ಲ. ಅವರಿಂದ ಇಲಾಖೆಗೆ ಬರಬೇಕಾದ ರೂ. 1925 ತೆರಿಗೆ ಬಾಕಿ ವಸೂಲು ಮಾಡಲು ಕ್ರಮ ಜರುಗಿಸಲಾಗಿತ್ತೆಂದು ಈ ತೆರಿಗೆ ಬಾಕಿಯು ಭಾಗಶಃ ಪಾವತಿಯಾಗಿ ಹಣವನ್ನು ಫಿರ್ಯಾದುದಾರರು ಪಾವತಿಸಿದ್ದು, ಯಾವುದೇ ಅಕ್ರಮ ಸಂಭಾವನೆ ರೂಪದಲ್ಲಿ ನೀಡಿದ್ದಲ್ಲವೆಂದು ತಿಳಿಸಿ ವಿಚಾರಣಾ ಸಮಯದಲ್ಲಿ ಫಿರ್ಯಾದುದಾರರು ವ್ಯತಿರಿಕ್ತ ಹೇಳಿಕೆ ನೀಡಿ ಆಪಾದಿತ ನೌಕರರು ಅಕ್ರಮ ಸಂಭಾವನೆಗೆ ಒತ್ತಾಯಿಸದೇ ತೆರಿಗೆ ಪಾವತಿಸಲು ಸೂಚಿಸಿದ್ದರೆಂದು ತಿಳಿಸಿ ಶಿಸ್ತು ಪ್ರಾಧಿಕಾರದ ಪರವಾದ ಸಾಕ್ಷಿಗಳು ಸಹ ವ್ಯತಿರಿಕ್ತ ಹೇಳಿಕೆ ನೀಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (6)ರ ಅಪರ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ದಿನಾಂಕ : 25–6–2010ರ ಪತ್ರದಲ್ಲಿ ವಿಚಾರಣಾಧಿಕಾರಿಗಳು 'Standared of proof that is required in the disciplinary proceedings is preponderance of probabilities and not proof beyond reasonable doubt as required in the criminal trials' ಎಂದು ತಿಳಿಸಿ, ಸಾಕ್ಷಿಗಳು ವ್ಯತಿರಿಕ್ತ ಹೇಳಿಕೆಗಳನ್ನು ವಿಚಾರಣಾ ಸಮಯದಲ್ಲಿ ತಿಳಿಸಿದ್ದರೂ ಸಹ ಪ್ರಶ್ನಿತ ಅಕ್ರಮ ಸಂಭಾವನೆ ಹಣವು ಆಪಾದಿತ ನೌಕರರ ಬಳಿ ಇದ್ದು, ಅದನ್ನು ಲೋಕಾಯುಕ್ತ ಪೊಲೀಸರಿಗೆ ಮಹಜರ್ ಸಮಯದಲ್ಲಿ ನೀಡಿರುತ್ತಾರೆ. ಇದು ತೆರಿಗೆ ಹಣವಾಗಿದ್ದಲ್ಲಿ ವಾಣಿಜ್ಯ ತೆರಿಗೆ ಅಧಿಕಾರಿಯ ವ್ಯಾನಿಟಿ ಬ್ಯಾಗಿನಲ್ಲಿ ಹಾಗೂ ವಾಣಿಜ್ಯ ತೆರಿಗೆ ಪರಿವೀಕ್ಷಕರ ಪ್ಯಾಂಟಿನ ಜೇಬಿನಲ್ಲಿಟ್ಟುಕೊಳ್ಳದೇ ಕಛೇರಿಯ cash chest ನಲ್ಲಿರಬೇಕಾಗಿತ್ತು. ಈ ಹಣಕ್ಕೆ ತೆರಿಗೆ ರಸೀದಿಯನ್ನು ಹಾಕುವುದರೊಳಗೆ ಲೋಕಾಯುಕ್ತ ಪೊಲೀಸರು ದಾಳಿ ಮಾಡಿರುತ್ತಾರೆ ಎನ್ನುವುದನ್ನು ಒಪ್ಪಲಾಗುವುದಿಲ್ಲ. ಅಲ್ಲದೆ ಕಛೇರಿಯ ಲೆಕ್ಕಪತ್ರ ನೋಡುವ ಸಿಬ್ಬಂದಿ ತೆರಿಗೆ ಹಣ ಪಡೆದು ರಸೀದಿ ನೀಡಬಹುದೇ ವಿನಃ ಕಛೇರಿಯ ಎಲ್ಲಾ ಅಧಿಕಾರಿ/ನೌಕರರು ತೆರಿಗೆ ಹಣ ಪಡೆಯಲು ಅವಕಾಶವಿರುವುದಿಲ್ಲ. ಹಾಗೂ ಟ್ರ್ಯಾಪ್ ಸಮಯದಲ್ಲಿ ಕಛೇರಿಯಲ್ಲಿನ ಸಿಬ್ಬಂದಿಯ ಉಪಸ್ಥಿತಿ ಬಗ್ಗೆ ನೌಕರರು ಹಾಗೂ ಸಾಕ್ಷಿಗಳಿಂದ ವ್ಯತಿರಿಕ್ತ ಹೇಳಿಕೆಗಳು ಬಂದಿವೆ ಎಂದು ತಿಳಿಸಿ, ಆರೋಪ ಸಾಬೀತಾಗಿವೆ ಎಂಬ ನಿರ್ಣಯಕ್ಕೆ ಬಂದಿರುತ್ತಾರೆ. ಮಾನ್ಯ ಉಪಲೋಕಾಯುಕ್ತರು ನಿರ್ಣಯವನ್ನು ಒಪ್ಪಿ, ಶ್ರೀಮತಿ ಹೆಚ್.ಎಸ್. ಕಮಲಮ್ಮ, ವಾಣಿಜ್ಯ ತೆರಿಗೆ ಅಧಿಕಾರಿ, ಹಾಗೂ ಶ್ರೀ ಎಸ್.ಬಿ. ನೆಲಗೋಲ್, ವಾಣಿಜ್ಯ ತೆರಿಗೆ ಪರಿವೀಕ್ಷಕ, ಇವರುಗಳನ್ನು ಕಡ್ಡಾಯ ನಿವೃತ್ತಿಗೊಳಿಸುವ ದಂಡನೆ ವಿಧಿಸಲು ಶಿಫಾರಸ್ಸು ಮಾಡಿರುತ್ತಾರೆ. ಶ್ರೀ ಎಸ್.ಬಿ. ನೆಲಗೋಲ್‌ರವರು ದಿನಾಂಕ : 5–11–2010 ರಂದು ನಿಧನ ಹೊಂದಿರುವುದರಿಂದ ಇವರ ವಿರುದ್ಧ ಮುಂದಿನ ಶಿಸ್ತುಕ್ರಮವನ್ನು ಕೈಬಿಡಲು ತೀರ್ಮಾನಿಸಲಾಗಿದೆ. ಆದ್ದರಿಂದ ಸರ್ಕಾರವು ಅಪರ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಇವರ ವರದಿಯ ಶಿಫಾರಸ್ಸನ್ನು ಕೂಲಂಕುಶವಾಗಿ ಪರಿಶೀಲಿಸಿ, ಶ್ರೀಮತಿ ಕಮಲಮ್ಮ, ವಾಣಿಜ್ಯ ತೆರಿಗೆ ಅಧಿಕರಿ, ಇವರಿಗೆ ಕಡ್ಡಾಯ ನಿವೃತ್ತಿ ದಂಡನೆ ವಿಧಿಸಲು ಹಾಗೂ ಶ್ರೀ ಎಸ್.ಬಿ. ನೆಲಗೋಲ್, ವಾಣಿಜ್ಯ ತೆರಿಗೆ ಪರಿವೀಕ್ಷಕರು, ಇವರು ದಿನಾಂಕ : 5–11–2010 ರಂದು ನಿಧನ ಹೊಂದಿರುವುದರಿಂದ ಇವರ ವಿರುದ್ಧದ ಶಿಸ್ತುಕ್ರಮವನ್ನು ಕೈಬಿಡಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 188 ವಾತೆಸಿ 1998, ಬೆಂಗಳೂರು, ದಿನಾಂಕ : 13–12–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(vi) ರ ಪ್ರಕಾರ ಶ್ರೀಮತಿ ಕಮಲಮ್ಮ, ವಾಣಿಜ್ಯ ತೆರಿಗೆ ಅಧಿಕಾರಿ, ಇವರಿಗೆ ಈ ಕೂಡಲೇ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಶ್ರೀ ಎಸ್.ಬಿ. ನೆಲಗೋಲ್, ವಾಣಿಜ್ಯ ತೆರಿಗೆ ಪರಿವೀಕ್ಷಕರು, ಇವರು ದಿನಾಂಕ : 5–11–2010ರಂದು ನಿಧನ ಹೊಂದಿರುವುದರಿಂದ ಇವರ ವಿರುದ್ಧದ ಶಿಸ್ತುಕ್ರಮವನ್ನು ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಆರ್. ಚಂದ್ರಶೇಖರಾರಾಧ್ಯ**
ಪೀಠಾಧಿಕಾರಿ,
ಪಿ.ಆರ್. 122 ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2).

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** 2011–12ನೇ ಸಾಲಿನಲ್ಲಿ ವಿಜ್ಞಾನ ಇಂಜಿನಿಯರಿಂಗ್ ಮತ್ತು ವೈದ್ಯಕೀಯ ಶ್ರೇಷ್ಠ ಕೇಂದ್ರಗಳ (CESEM) ಸ್ಥಾಪಿಸುವ ಯೋಜನೆಯನ್ನು ಅನುಷ್ಠಾನಗೊಳಿಸುವ ಬಗ್ಗೆ

**ಓದಲಾಗಿದೆ :**
1. ಸರ್ಕಾರದ ಆದೇಶ ಸಂ. ವಿಯಇ 189 ವಿತ್ರಮ 2010, ದಿನಾಂಕ : 19–3–2011.
2. ಸರ್ಕಾರದ ಆದೇಶ ಸಂ. ವಿಯಇ 90 ವಿತ್ರಮ 2011, ದಿನಾಂಕ : 25–5–2011.
3. ಸರ್ಕಾರದ ಆದೇಶ ಸಂ. ವಿಯಇ 55 ವಿತ್ರಮ 2011, ದಿನಾಂಕ : 14–6–2011.
4. ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ಇವರ ಪತ್ರ ಸಂಖ್ಯೆ : VGST/CISE/2011-12/1123, ದಿನಾಂಕ : 7–12–2011.

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ, ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು 2011–12ನೇ ಸಾಲಿಗೆ ಮುಂದುವರೆಸಿ, ಈ ಯೋಜನೆಗಳನ್ನು ಅನುಷ್ಠಾನಗೊಳಿಸಲು ಆದೇಶ ಹೊರಡಿಸಲಾಗಿದೆ.

ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ಆದೇಶದಲ್ಲಿ 2011–12ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 3425–60–600–0–02 (059) (ಯೋ) ಇದರಡಿಯಲ್ಲಿ ಒಟ್ಟು ರೂ. 10.00 ಕೋಟಿಗಳ ಅನುದಾನವನ್ನು ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಯೋಜನೆಗಳಿಗಾಗಿ ಕಲ್ಪಿಸಲಾಗಿದ್ದು, ಯೋಜನೆಗಳ ಅನುಷ್ಠಾನಕ್ಕಾಗಿ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಲಾಗಿದೆ.

ಮೇಲೆ ಕ್ರಮಾಂಕ (3) ರಲ್ಲಿ ಓದಲಾದ ಆದೇಶದಲ್ಲಿ 2011–12ನೇ ಸಾಲಿನಲ್ಲಿ ವಿಜ್ಞಾನ ಇಂಜಿನಿಯರಿಂಗ್ ಮತ್ತು ವೈದ್ಯಕೀಯ ಶ್ರೇಷ್ಠ ಕೇಂದ್ರಗಳ (Establishment of centres of Excellence in Science Engineering and Medicine (CESEM) ಸ್ಥಾಪಿಸುವ ಯೋಜನೆಯ ಅನುಷ್ಠಾನಕ್ಕಾಗಿ ಕಾಯ್ದಿರಿಸಿದ್ದ ರೂ. 300.00 ಲಕ್ಷಗಳಲ್ಲಿ ಮೊದಲನೇ ಕಂತಾಗಿ ರೂ. 100.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಿದೆ.

ಮೇಲೆ ಕ್ರಮಾಂಕ (4)ರಲ್ಲಿ ಓದಲಾದ ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ, ಬೆಂಗಳೂರು. ಇವರ ಪತ್ರದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಮಾರ್ಗಸೂಚಿಯನ್ವಯ ವಿಜ್ಞಾನ ಇಂಜಿನಿಯರಿಂಗ್ ಮತ್ತು ವೈದ್ಯಕೀಯ ಶ್ರೇಷ್ಠ ಕೇಂದ್ರಗಳ ಸ್ಥಾಪಿಸುವ ಯೋಜನೆಯನ್ನು ಅನುಷ್ಠಾನಗೊಳಿಸುವ ಸಲುವಾಗಿ ಅರ್ಜಿಯನ್ನು ಆಹ್ವಾನಿಸಿದ್ದು, ನಿಗದಿಪಡಿಸಿದ ಕೊನೆಯ ದಿನಾಂಕ : 30–6–2010 ರೊಳಗೆ 80 ಅರ್ಜಿಗಳನ್ನು ಸ್ವೀಕರಿಸಲಾಗಿದ್ದು, ಸದರಿ ಅರ್ಜಿಗಳನ್ನು ದಿನಾಂಕ : 10–11–2011 ರಂದು ಉಪ ಸಮಿತಿಯು

ಮಾರ್ಗಸೂಚಿಯನ್ವಯ ಪರಿಶೀಲಿಸಿ 5 ಅರ್ಹ ಅರ್ಜಿಗಳನ್ನು ಶಿಫಾರಸ್ಸು ಮಾಡಿದ್ದು, ಆಯಾಯ ಸಂಸ್ಥೆಗಳಿಗೆ ತಲಾ ರೂ. 20.00 ಲಕ್ಷಗಳಂತೆ ಒಟ್ಟು ರೂ. 100.00 ಲಕ್ಷಗಳಲ್ಲಿ ಐದು ಅರ್ಹ ಫಲಾನುಭವಿಗಳಿಗೆ ಅನುದಾನವನ್ನು ಒದಗಿಸಲು ಸರ್ಕಾರದಿಂದ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಆಯ್ಕೆ ಉಪ ಸಮಿತಿಯ ಶಿಫಾರಸ್ಸಿನಂತೆ ವಿಜ್ಞಾನ ಇಂಜಿನಿಯರಿಂಗ್ ಮತ್ತು ವೈದ್ಯಕೀಯ ಶ್ರೇಷ್ಠ ಕೇಂದ್ರಗಳ ಸ್ಥಾಪಿಸುವ ಯೋಜನೆಯನ್ನು ಅನುಷ್ಠಾನಗೊಳಿಸುವ ಕುರಿತು ಪ್ರಸ್ತಾವನೆಗಳನ್ನು ಅನುಮೋದಿಸಲು ನಿರ್ದರಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಿಯಇ 55 ವಿತ್ರಮ 2011, ಬೆಂಗಳೂರು, ದಿನಾಂಕ : 17-12-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ 2011-12ನೇ ಸಾಲಿನ ಯೋಜನಾ ಕಾರ್ಯಕ್ರಮವಾದ ವಿಜ್ಞಾನ ಇಂಜಿನಿಯರಿಂಗ್ ಮತ್ತು ವೈದ್ಯಕೀಯ ಶ್ರೇಷ್ಠ ಕೇಂದ್ರಗಳನ್ನು ಸ್ಥಾಪಿಸುವ (Establishment of centres of Excellence in Science Engineering and Medicine (CESEM) ಯೋಜನೆಗೆ ದಾರ್ಶನಿಕ ಸಮೂಹದ ಆಯ್ಕೆ ಉಪ ಸಮಿತಿಯು 2011-12ನೇ ಸಾಲಿಗೆ ಶಿಫಾರಸ್ಸು ಮಾಡಿರುವ 5 ಫಲಾನುಭವಿಗಳಿಗೆ ಸರ್ಕಾರದ ಅನುಮೋದನೆಯನ್ನು ಈ ಆದೇಶದ "ಅನುಬಂಧ-ಅ" ರಂತೆ ನೀಡಲಾಗಿದೆ.

ವಿಜ್ಞಾನ ಇಂಜಿನಿಯರಿಂಗ್ ಮತ್ತು ವೈದ್ಯಕೀಯ ಶ್ರೇಷ್ಠ ಕೇಂದ್ರಗಳನ್ನು ಸ್ಥಾಪಿಸುವ 2011-12ನೇ ಸಾಲಿನ ಫಲಾನುಭವಿಗಳಿಗೆ ಸರ್ಕಾರಿ ಆದೇಶ ಸಂಖ್ಯೆ : ವಿಯಇ 55 ವಿತ್ರಮ 2011 ದಿನಾಂಕ : 14-6-2011ರಲ್ಲಿ ಈಗಾಗಲೇ ಬಿಡುಗಡೆ ಮಾಡಲಾದ ಒಟ್ಟು ರೂ. 300.00 ಲಕ್ಷಗಳಲ್ಲಿ ಆಯ್ಕೆ ಸಮಿತಿಯು ಆಯ್ಕೆ ಮಾಡಿರುವ 5 ಫಲಾನುಭವಿಗಳಿಗೆ ತಲಾ ರೂ. 20.00 ಲಕ್ಷದಂತೆ ಒಟ್ಟು ರೂ. 100.00 ಲಕ್ಷಗಳನ್ನು ಉಪಯೋಗಿಸಿಕೊಳ್ಳುವಂತೆ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹಕ್ಕೆ ಈ ಕೆಳಕಂಡ ನಿಬಂಧನೆಯ ಮೇರೆಗೆ ಆದೇಶಿಸಲಾಗಿದೆ.

1. ಈ ಯೋಜನೆಯ ಅನುಷ್ಠಾನದ ಸಲುವಾಗಿ ಬಿಡುಗಡೆ ಮಾಡುವ ಹಣವು ಸದ್ಬಳಕೆಯಾಗದಿದ್ದರೆ ಹಾಗೂ ಯೋಜನೆ ಅನುಷ್ಠಾನವನ್ನು ಮಧ್ಯದಲ್ಲಿ ರದ್ದುಪಡಿಸಿದರೆ ಸರ್ಕಾರದಿಂದ ನೀಡಲಾದ ಆರ್ಥಿಕ ಸೌಲಭ್ಯವನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಕರಾರಿನಲ್ಲಿ ಸೂಕ್ತ ನಿಬಂಧನೆಗಳನ್ನು ಶಿಕ್ಷಣ ಸಂಸ್ಥೆಗಳಿಗೆ ವಿಧಿಸತಕ್ಕದ್ದು ; ಹಾಗೂ ಯೋಜನೆಯನ್ನು ಶಿಕ್ಷಣ ಸಂಸ್ಥೆಗಳು ನಿರ್ವಹಿಸುವ ಬಗ್ಗೆ ಕಾಲ ಕಾಲಕ್ಕೆ ಮೌಲ್ಯಮಾಪನ ಕೈಗೊಳ್ಳತಕ್ಕದ್ದು.
2. ಮಹಾಲೇಖಪಾಲರಿಗೆ ಸರ್ಕಾರದಿಂದ ನಿಗಧಿತ ಅವಧಿಯೊಳಗೆ ಉಪಯೋಗತಾ ಪ್ರಮಾಣ ಪತ್ರಗಳನ್ನು ಕಳುಹಿಸಬೇಕಿರುವುದರಿಂದ, ಈ ಯೋಜನೆಯ ಅನುಷ್ಠಾನಕ್ಕೆ ಬಿಡುಗಡೆ ಮಾಡಿರುವ ಅನುದಾನವನ್ನು ಸದುಪಯೋಗಿಸಿಕೊಂಡು ಉಪಯೋಗತಾ ಪ್ರಮಾಣ ಪತ್ರಗಳನ್ನು ತುರ್ತಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
3. 2009-10 ಮತ್ತು 2010-11ನೇ ಸಾಲಿನಲ್ಲಿ ವಿಜ್ಞಾನ ಶಿಕ್ಷಣದ ಸೃಜನಶೀಲ ಕೇಂದ್ರಗಳನ್ನು ಸ್ಥಾಪಿಸಲು ಅನುದಾನ ಒದಗಿಸಿದ್ದು, ಕೇಂದ್ರಗಳ ಸ್ಥಾಪನೆ ಸಂಬಂಧ ಉಪ ಸಮಿತಿಯಿಂದ ಕೈಗೊಂಡ ಮೌಲ್ಯಮಾಪನ ಪ್ರಗತಿಯನ್ನು ಸರ್ಕಾರಕ್ಕೆ ತಪ್ಪದೇ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ : 16-5-2008ರ ಅಡಿಯಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಪ್ರದತ್ತವಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಎಸ್. ಮದ್ಭಾವಿ**
ಸರ್ಕಾರದ ಅಧೀನ ಕಾರ್ಯದರ್ಶಿ (ವಿ & ತಂ),
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಸರ್ಕಾರಿ ಆದೇಶ ಸಂಖ್ಯೆ : ವಿಯಇ 55 ವಿತ್ರಮ 2011, ಬೆಂಗಳೂರು ದಿನಾಂಕ : 17-12-2011.

**ಅನುಬಂಧ-ಅ**

| Sl. No. | Name & Address of the Institution/College Recommended | Themes of centres of Excellenced |
|---|---|---|
| 1 | Dept. of Project Planning & Monitoring Cell (PPMC), University of Horticultural Sciences Sector No. 60, Navanagar, Bagalkot-587102 | Establishing Research, Conservation & Multiplication Centre on Wild Orchids at Aloka Forest Heritage Centre (AFHC), Mysore |
| 2 | Dept. of Chemistry, Commerce B.H.S. Arts & T.G.P. Science College Jamkhandi-587301, Bagalkot Dist. | Flood and Heavy Irrigation effect on soil properties of cultivated areas in Bagalkot District, Karnataka State |
| 3 | Dept. of Electronics & Communication Engineering, B.G.S. Institute of Technology B.G. Nagar, Nagamangala Taluk, Mandya Dist. | Analysis and Reduction of Attention Deficit Hyperactivity Disorder (ADHD)/Attention Deficit Disorder (ADD) Symptoms using Bio-feedback and other Techniques |
| 4 | Dept. of Biochmistry JSS Medical College Sri Shivarathreeshwara Nagar, Mysore-570015. | Isolation of Colorectal cancer stem cells based on biomarker expression & test the efficacy of Piper Nigrum as an anticancer agent for further use in translational studies |

| | | |
|---|---|---|
| 5 | Dept. of Electronics & Communication Enginering, M.S. Ramaiah Institute of Technology Vidya Soudha, M.S. Ramaiah Nagar, M.S.R.I.T. Post, Bangalore-560054 | Food grain characterization using RF technique, security technology |

ಎ.ಎಸ್. ಮದ್ಭಾವಿ
ಸರ್ಕಾರದ ಅಧೀನ ಕಾರ್ಯದರ್ಶಿ (ವಿ & ತಂ),
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಪಿ.ಆರ್. 123

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** 2011–12ನೇ ಸಾಲಿನಲ್ಲಿ ವಿಜ್ಞಾನ ಶಿಕ್ಷಣದ ಸೃಜನಶೀಲ ಕೇಂದ್ರಗಳನ್ನು ಸ್ಥಾಪಿಸುವ (CISE) ಯೋಜನೆಯನ್ನು ಅನುಷ್ಠಾನಗೊಳಿಸುವ ಬಗ್ಗೆ

**ಓದಲಾಗಿದೆ :**
1. ಸರ್ಕಾರದ ಆದೇಶ ಸಂ. ವಿಯಇ 189 ವಿತ್ರಮ 2010, ದಿನಾಂಕ : 19–3–2011.
2. ಸರ್ಕಾರದ ಆದೇಶ ಸಂ. ವಿಯಇ 90 ವಿತ್ರಮ 2011, ದಿನಾಂಕ : 25–5–2011.
3. ಸರ್ಕಾರದ ಆದೇಶ ಸಂ. ವಿಯಇ 54 ವಿತ್ರಮ 2011, ದಿನಾಂಕ : 14–6–2011.
4. ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ಇವರ ಪತ್ರ ಸಂಖ್ಯೆ : VGST/CISE/2011-12/1123, ದಿನಾಂಕ : 7–12–2011.

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ, ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು 2011–12ನೇ ಸಾಲಿಗೆ ಮುಂದುವರೆಸಿ, ಈ ಯೋಜನೆಗಳನ್ನು ಅನುಷ್ಠಾನಗೊಳಿಸಲು ಆದೇಶ ಹೊರಡಿಸಲಾಗಿದೆ.

ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ಆದೇಶದಲ್ಲಿ 2011–12ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 3425–60–600–0–02 (059) (ಯೋ) ಇದರಡಿಯಲ್ಲಿ ಒಟ್ಟು ರೂ. 10.00 ಕೋಟಿಗಳ ಅನುದಾನವನ್ನು ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಯೋಜನೆಗಳಿಗಾಗಿ ಕಲ್ಪಿಸಲಾಗಿದ್ದು, ಯೋಜನೆಗಳ ಅನುಷ್ಠಾನಕ್ಕಾಗಿ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಲಾಗಿದೆ.

ಮೇಲೆ ಕ್ರಮಾಂಕ (3) ರಲ್ಲಿ ಓದಲಾದ ಆದೇಶದಲ್ಲಿ 2011–12ನೇ ಸಾಲಿನಲ್ಲಿ ವಿಜ್ಞಾನ ಶಿಕ್ಷಣದ ಸೃಜನಶೀಲ ಕೇಂದ್ರಗಳ ಸ್ಥಾಪಿಸುವ (Centres of Innovative Science Education (CISE) ಯೋಜನೆಯ ಅನುಷ್ಠಾನಕ್ಕಾಗಿ ಕಾಯ್ದಿರಿಸಿದ್ದ ರೂ. 240.00 ಲಕ್ಷಗಳಲ್ಲಿ ಮೊದಲನೇ ಕಂತಾಗಿ ರೂ. 100.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಿದೆ.

ಮೇಲೆ ಕ್ರಮಾಂಕ (4)ರಲ್ಲಿ ಓದಲಾದ ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ, ಬೆಂಗಳೂರು. ಇವರ ಪತ್ರದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಮಾರ್ಗಸೂಚಿಯನ್ವಯ 2011–12ನೇ ಸಾಲಿಗೆ ವಿಜ್ಞಾನ ಶಿಕ್ಷಣದ ಸೃಜನಶೀಲ ಕೇಂದ್ರಗಳನ್ನು ಸ್ಥಾಪಿಸುವ ಯೋಜನೆಯ ಅನುಷ್ಠಾನದ ಸಲುವಾಗಿ ಅರ್ಜಿಯನ್ನು ಆಹ್ವಾನಿಸಿದ್ದು, ನಿಗದಿಪಡಿಸಿದ ಕೊನೆಯ ದಿನಾಂಕ : 30–6–2011 ರೊಳಗೆ 40 ಅರ್ಜಿಗಳನ್ನು ಸ್ವೀಕರಿಸಲಾಗಿದ್ದು, ಸದರಿ ಅರ್ಜಿಗಳನ್ನು ದಿನಾಂಕ : 10–11–2011 ರಂದು ಆಯ್ಕೆ ಉಪ ಸಮಿತಿಯು ಮಾರ್ಗಸೂಚಿಯನ್ವಯ ಅರ್ಜಿಗಳನ್ನು ಪರಿಶೀಲಿಸಿ 10 ಅರ್ಹ ಫಲಾನುಭವಿಗಳನ್ನು ಪ್ರಶಸ್ತಿಗಾಗಿ ಶಿಫಾರಸ್ಸು ಮಾಡಿರುವುದರಿಂದ, ಸರ್ಕಾರದಿಂದ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಉಪ ಸಮಿತಿಯ ಶಿಫಾರಸ್ಸಿನಂತೆ 2011–12ನೇ ಸಾಲಿನಲ್ಲಿ ವಿಜ್ಞಾನ ಶಿಕ್ಷಣದ ಸೃಜನಶೀಲ ಕೇಂದ್ರಗಳನ್ನು ಸ್ಥಾಪಿಸುವ ಯೋಜನೆಯ ಅನುಷ್ಠಾನದ ಕುರಿತು ಸದರಿ ಪ್ರಸ್ತಾವನೆಗಳನ್ನು ಅನುಮೋದಿಸಲು ನಿರ್ಧರಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಿಯಇ 54 ವಿತ್ರಮ 2011, ಬೆಂಗಳೂರು, ದಿನಾಂಕ : 17–12–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ 2011–12ನೇ ಸಾಲಿನ ಯೋಜನಾ ಕಾರ್ಯಕ್ರಮವಾದ ವಿಜ್ಞಾನ ಶಿಕ್ಷಣದ ಸೃಜನಶೀಲ ಕೇಂದ್ರಗಳನ್ನು ಸ್ಥಾಪಿಸುವ (Centres of Innovative Science Education) ಯೋಜನೆಗೆ ದಾರ್ಶನಿಕ ಸಮೂಹದ ಆಯ್ಕೆ ಉಪ ಸಮಿತಿಯು 2011–12ನೇ ಸಾಲಿಗೆ ಶಿಫಾರಸ್ಸು ಮಾಡಿರುವ 10 ಫಲಾನುಭವಿಗಳಿಗೆ ಸರ್ಕಾರದ ಅನುಮೋದನೆಯನ್ನು ಈ ಆದೇಶದ "ಅನುಬಂಧ–ಅ" ರಂತೆ ನೀಡಲಾಗಿದೆ.

ವಿಜ್ಞಾನ ಶಿಕ್ಷಣದ ಸೃಜನಶೀಲ ಕೇಂದ್ರಗಳನ್ನು ಸ್ಥಾಪಿಸುವ 2011–12ನೇ ಸಾಲಿನ ಫಲಾನುಭವಿಗಳಿಗೆ ಸರ್ಕಾರಿ ಆದೇಶ ಸಂಖ್ಯೆ : ವಿಯಇ 54 ವಿತ್ರಮ 2011 ದಿನಾಂಕ : 14–6–2011ರಲ್ಲಿ ಈಗಾಗಲೇ ಬಿಡುಗಡೆ ಮಾಡಲಾದ ಒಟ್ಟು ರೂ. 240.00 ಲಕ್ಷಗಳಲ್ಲಿ ಆಯ್ಕೆ ಸಮಿತಿಯು ಆಯ್ಕೆ ಮಾಡಿರುವ 10 ಫಲಾನುಭವಿಗಳಿಗೆ ತಲಾ ರೂ. 10.00 ಲಕ್ಷದಂತೆ ಒಟ್ಟು ರೂ. 100.00 ಲಕ್ಷಗಳನ್ನು ಉಪಯೋಗಿಸಿಕೊಳ್ಳುವಂತೆ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹಕ್ಕೆ ಈ ಕೆಳಕಂಡ ನಿಬಂಧನೆಯ ಮೇರೆಗೆ ಆದೇಶಿಸಲಾಗಿದೆ.

1. ವಿಜ್ಞಾನ ಶಿಕ್ಷಣದ ಸೃಜನಶೀಲ ಕೇಂದ್ರಗಳನ್ನು ಸ್ಥಾಪಿಸುವ ಯೋಜನೆಯ ಅನುಷ್ಠಾನದ ಸಲುವಾಗಿ ಬಿಡುಗಡೆ ಮಾಡುವ ಹಣವು ಸದ್ಬಳಕೆಯಾಗದಿದ್ದರೆ ಹಾಗೂ ಯೋಜನೆ ಅನುಷ್ಠಾನವನ್ನು ಮಧ್ಯದಲ್ಲಿ ರದ್ದುಪಡಿಸಿದರೆ ಸರ್ಕಾರದಿಂದ ನೀಡಲಾದ ಆರ್ಥಿಕ ಸೌಲಭ್ಯವನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಕರಾರಿನಲ್ಲಿ ಸೂಕ್ತ ನಿಬಂಧನೆಗಳನ್ನು ಸಂಸ್ಥೆಗಳಿಗೆ ವಿಧಿಸತಕ್ಕದ್ದು,
2. ಮಹಾಲೇಖಪಾಲರಿಗೆ ಸರ್ಕಾರದಿಂದ ನಿಗಧಿತ ಅವಧಿಯೊಳಗೆ ಉಪಯೋಗತಾ ಪ್ರಮಾಣ ಪತ್ರಗಳನ್ನು ಕಳುಹಿಸಬೇಕಿರುವುದರಿಂದ, ಈ ಯೋಜನೆಯ ಅನುಷ್ಠಾನಕ್ಕೆ ಬಿಡುಗಡೆ ಮಾಡಿರುವ ಅನುದಾನವನ್ನು ಸದುಪಯೋಗಿಸಿಕೊಂಡು ಉಪಯೋಗತಾ ಪ್ರಮಾಣ ಪತ್ರಗಳನ್ನು ತುರ್ತಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

3. 2009–10 ಮತ್ತು 2010–11ನೇ ಸಾಲಿನಲ್ಲಿ ವಿಜ್ಞಾನ ಶಿಕ್ಷಣದ ಸೃಜನಶೀಲ ಕೇಂದ್ರಗಳನ್ನು ಸ್ಥಾಪಿಸಲು ಒದಗಿಸಿದ್ದು, ಕೇಂದ್ರಗಳ ಸ್ಥಾಪನೆ ಸಂಬಂಧ ಉಪ ಸಮಿತಿಯಿಂದ ಕೈಗೊಂಡ ಮೌಲ್ಯಮಾಪನ ಪ್ರಗತಿಯನ್ನು ಸರ್ಕಾರಕ್ಕೆ ತಪ್ಪದೇ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ : 16–5–2008ರ ಅಡಿಯಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಪ್ರದತ್ತವಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎಸ್. ಮದ್ಭಾವಿ**

ಸರ್ಕಾರದ ಅಧೀನ ಕಾರ್ಯದರ್ಶಿ (ವಿ & ತಂ),
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಸರ್ಕಾರಿ ಆದೇಶ ಸಂಖ್ಯೆ : ವಿಯಇ 54 ವಿತ್ರಮ 2011, ಬೆಂಗಳೂರು ದಿನಾಂಕ : 17–12–2011.

**ಅನುಬಂಧ–ಅ**

| Sl. No. | Name & Address of the Institution/College Recommended | Themes of centres of Innovative Science Education |
|---|---|---|
| 1 | Dept. of Mathematics & Research Centre in Applied Mathematics, M.E.S. College, Malleswaram, Bangalore | Numerical & Analytical Solutions of Nonliner differential and Integral equations |
| 2 | Dept. of Physics, Sri Sathya Sai Institute of Higher Learning Brindavan Campus, Kadugodi Post, Bangalore -560067 | Research Based Reforms in Physics Instruction : Classroom & Laboratory |
| 3 | Dept. of Biotechnology, The Oxford College of Science, No. 32, 19th Main, 17th B Cross, Sector-4, H.S.R. Layout, Bangalore-2 | Micro-propagation & Pharmacological Investigation on of alstonia scholaris |
| 4 | Dept. of Biotechnology, Maharani's Science College for Women J.L.B. Road, University of Mysore, Mysore-570005. | Elicitation & Characterization of Defence Mechanism in Pearl Millet by in Vitro C-culturing of Pearl millet and Sclerospora graminicola |
| 5 | Dept. of Chemical Engineering, Bapuji Institute of Engineering & Technology, P.Box No. 325, Davangere-04 | Pharmacological Screening of Traditional Medicines |
| 6 | Dept. Of Pharmacognosy & Phytochemistry, College of Pharmacy JNMC Campus, Nehru Nagar, KLE University, Belgaum-590010 | Chemical & Biological Activity Profiling of Some Ayurvedic Drugs with controversial Nomenclature |
| 7 | Dept. of Anatomy, Karnataka Veterinary, Animal & Fisheries Sciences University, Veterinary College, KVAFSU, Hebbal, Bangalore-560024 | Flash based innovative technique as an aid in teaching Veterinary Anatomy |
| 8 | Dept. of Pharmacognosy, National College of Pharmacy, NES Campus, Balaraj Urs Road, Shimoga-577201 | Modern method of Teaching by using High Tech Teaching aids |
| 9 | Dept. of Pharmacology, Hanagal Shri Kumreshwar College of Pharmacy, Bagalkot-587101 | Advanced Centre for Teaching & Research in Pharmacology |
| 10 | Dept. of Chemistry, Ghousia College of Engineering B.M. Road, Ramanagaram-562159 | Synthesis & Development of Conductive Polymer Composite & Nano Crystalline Metal Oxide Thin Film Coatings for various Applications |

**ಎ.ಎಸ್. ಮದ್ಭಾವಿ**

ಸರ್ಕಾರದ ಅಧೀನ ಕಾರ್ಯದರ್ಶಿ (ವಿ & ತಂ),
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಪಿ.ಆರ್. 124

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಬೆಳ್ಳಾವಿ ಹೋಬಳಿ ಅಪ್ಪಿನಾಯಕಹಳ್ಳಿ ಸರ್ವೆ ನಂ. 123 ರಲ್ಲಿ ಪಿಕಪ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ : ಮುಸದ/ತಾಂ.ಸ.1/ಸ.ಇಂ.2/ ಅಪ್ಪಿನಾಯಕನಹಳ್ಳಿ/2011–12/3387, ದಿನಾಂಕ : 18–10–2011.

**ಪ್ರಸ್ತಾವನೆ :**

ವಿಶೇಷ ಘಟಕ ಯೋಜನೆಯಡಿ ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಬೆಳ್ಳಾವಿ ಹೋಬಳಿ ಅಪ್ಪಿನಾಯಕನಹಳ್ಳಿ ಸರ್ವೆ ನಂ. 123 ರಲ್ಲಿ ಪಿಕಪ್ ನಿರ್ಮಾಣ ಕಾಮಗಾರಿಯ ರೂ. 40.00 ಲಕ್ಷಗಳ ಅಂದಾಜು ಪಟ್ಟಿಗೆ ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಬೆಂಗಳೂರು ಇವರು ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ತುಮಕೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ತುಮಕೂರು ಜಿಲ್ಲಾ ಟೆಂಡರ್ ಬುಲೆಟಿನ್ | 29–10–2010 |
| ಏಕೇಶ್ ದಿನ ಪತ್ರಿಕೆ | 30–10–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಐವರು ಗುತ್ತಿಗೆದಾರರು ಭಾಗವಹಿಸಿದ್ದು, ಇವರಲ್ಲಿ ಇಬ್ಬರ ಇ.ಎಂ.ಡಿ. ಕ್ರಮಬದ್ಧವಿಲ್ಲದಿದ್ದರಿಂದ ಪರಿಗಣಿಸಿರುವುದಿಲ್ಲ. ಉಳಿದ ಮೂವರ ಪೈಕಿ ಒಬ್ಬರ ಟೆಂಡರ್ ಅನರ್ಹಗೊಳಿಸಲಾಗಿರುತ್ತದೆ. ಇವರಲ್ಲಿ ಇಬ್ಬರು ಮಾತ್ರ ಅರ್ಹತೆ ಹೊಂದಿದ್ದು, ಇವರ ಟೆಂಡರ್ ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಆಗ ಚಾಲ್ತಿಯಲ್ಲಿದ್ದ ದರಪಟ್ಟಿಯ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 39,96,351/– |
|---|---|---|---|---|
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಟೆಂಡರ್‌ಗಿಟ್ಟ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಷರಾ |
| 1 | ವೈ.ಆರ್. ವೇಣು ಗೋಪಾಲ್, 1ನೇ ದರ್ಜೆ ಗುತ್ತಿಗೆದಾರರು | 38,07,809/– | 4.718 ಕಡಿಮೆ | ಇವರ ಟೆಂಡರನ್ನು ಅನರ್ಹಗೊಳಿಸಲಾಗಿದೆ. |
| 2 | ಜೆ.ಕೆ. ಮಂಜುನಾಥ, 1ನೇ ದರ್ಜೆ ಗುತ್ತಿಗೆದಾರರು | 42,34,978/– | 5.97 ಹೆಚ್ಚು | ಇವರು ಸ್ವಯಂಪ್ರೇರಿತರಾಗಿ ಶೇಕಡ 4.718 ರಷ್ಟು ಕಡಿಮೆ ದರಗಳಲ್ಲಿ ನಿರ್ವಹಿಸುವುದಾಗಿ ಪತ್ರ ನೀಡಿದ್ದರಿಂದ ನಂತರ ಇವರ ಟೆಂಡರನ್ನು ಈ ದರಗಳಲ್ಲಿ ಅನುಮೋದಿಸಿ ಕೈಗೊಳ್ಳಲಾಗಿರುತ್ತದೆ. |
| 3 | ಆರ್.ಹೆಚ್. ತಿಮ್ಮಪ್ಪ, 1ನೇ ದರ್ಜೆ ಗುತ್ತಿಗೆದಾರರು | 43,17,622/– | 8.04 ಹೆಚ್ಚು | |

ಶ್ರೀ ಜೆ.ಕೆ. ಮಂಜುನಾಥ, 1ನೇ ದರ್ಜೆ ಗುತ್ತಿಗೆದಾರರು ರವರು ಸ್ವಯಂಪ್ರೇರಿತರಾಗಿ ಶೇಕಡ 4.718 ರಷ್ಟು ಕಡಿಮೆ ದರಗಳಲ್ಲಿ ಕಾಮಗಾರಿಯನ್ನು ನಿರ್ವಹಿಸುವುದಾಗಿ ಪತ್ರ ನೀಡದ್ದರು. ಸರ್ಕಾರದ ಆದೇಶ ಸಂಖ್ಯೆ : ಪಿ.ಡಬ್ಲ್ಯೂಡಿ ಎಫ್.ಸಿ.–1/2009 ಬೆಂಗಳೂರು, ದಿನಾಂಕ : 22–6–2009 ಹಾಗೂ ಆರ್ಥಿಕ ಪ್ರತ್ಯಾ ಯೋಜನೆಯಂತೆ ಟೆಂಡರ್‌ನ್ನು ಸಂಧಾನ ನಡೆಸಿ ಅನುಮೋದನೆ ನೀಡುವ ಅಧಿಕಾರವು ಸರ್ಕಾರದ ವ್ಯಾಪ್ತಿಯಲ್ಲಿರುತ್ತದೆ. ಈ ದರಗಳು ಸಮಂಜಸವೆಂದು ಹಾಗೂ ಕಾಮಗಾರಿಯನ್ನು ಆದಷ್ಟು ಬೇಗನೆ ಅನುಷ್ಠಾನಗೊಳಿಸಬಹುದೆಂಬ ಉದ್ದೇಶದಿಂದ ಸದರಿ ಟೆಂಡರನ್ನು ಕಾರ್ಯಪಾಲಕ ಇಂಜಿನಿಯರ್ ರವರು ಅನುಮೋದಿಸಿ ಸದರಿ ಗುತ್ತಿಗೆದಾರರೊಂದಿಗೆ ಕರಾರು ಒಪ್ಪಂದವನ್ನು ಮಾಡಿಕೊಂಡು ಕಾಮಗಾರಿಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಈಗ ಸದರಿ ಟೆಂಡರ್ ಅನ್ನು ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆಯಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಶ್ರೀ ಜೆ.ಕೆ. ಮಂಜುನಾಥ, 1ನೇ ದರ್ಜೆ ಗುತ್ತಿಗೆದಾರರು ಇವರ ಟೆಂಡರ್ ಅನ್ನು ಶೇಕಡ 4.718 ರಷ್ಟು ಕಡಿಮೆ ದರಗಳಿಗೆ (ರೂ. 38,07,809/–) ಅನುಮೋದಿಸಿರುವುದರಿಂದ ಹಾಗೂ ಈ ಟೆಂಡರ್ ದರಗಳು ಸಮಂಜಸವೆಂದು ಕಂಡು ಬರುವುದರಿಂದ ಇದನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ ಈ ಟೆಂಡರ್‌ಗೆ ಘಟನೋತ್ತರ ಅನುಮೋದನೆ ನೀಡಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 79 ಅಪಿಬಂ 2011 (ತಾಂತ್ರಿಕ), ಬೆಂಗಳೂರು, ದಿನಾಂಕ : 14ನೇ ಡಿಸೆಂಬರ್, 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಬೆಳ್ಳಾವಿ ಹೋಬಳಿ ಅಪ್ಪಿನಾಯಕನಹಳ್ಳಿ ಸರ್ವೆ ನಂ. 123 ರಲ್ಲಿ ಪಿಕಪ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 39,96,351/–ಗಳ ಮೇಲೆ ಶೇ. 4.718 ರಷ್ಟು ಕಡಿಮೆ ದರದಲ್ಲಿ ಅಂದರೆ ರೂ. 38,07,809/–ಗಳಿಗೆ (ರೂ ಮೂವತ್ತೆಂಟು ಲಕ್ಷ ಏಳು ಸಾವಿರದ ಎಂಟು ನೂರಾ ಒಂಬತ್ತು ರೂಪಾಯಿಗಳು ಮಾತ್ರ) ಕಾಮಗಾರಿಯನ್ನು ಶ್ರೀ ಜೆ.ಕೆ. ಮಂಜುನಾಥ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಸರ್ಕಾರವು ಘಟನೋತ್ತರ ಅನುಮೋದನೆ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–1–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 125

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಹಾವೇರಿ ಜಿಲ್ಲೆ ಹಾನಗಲ್ ತಾಲ್ಲೂಕಿನ ಮಕರವಳ್ಳಿ ಏತ ನೀರಾವರಿ ಯೋಜನೆ ಕಾಮಗಾರಿಯ ಮಾರ್ಪಡಿತ ಅಂದಾಜುಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ ಸನೀಇ 30 ಏನೀಯೋ 2007 ದಿನಾಂಕ 17–12–2007

2) ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಜಿಬಿ–3/2011–12/2270 ದಿನಾಂಕ:

3) NB/SPD/1006/RIDF-XVI (Karnataka RO)/ 110PSC/2010-2011 Dated 28.06.2010

**ಪ್ರಸ್ತಾವನೆ :**

ಮುಖ್ಯ ಅಭಿಯಂತರರು, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಹಾವೇರಿ ಜಿಲ್ಲೆ ಹಾನಗಲ್ ತಾಲ್ಲೂಕಿನ ಮಕರವಳ್ಳಿ ಏತ ನೀರಾವರಿ ಯೋಜನೆಯ ರೂ. 1000.00 ಲಕ್ಷ ಮೊತ್ತದ ಮಾರ್ಪಡಿತ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

2007–08 ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ "4702–00–101–3–01–139 ಏತ ನೀರಾವರಿ ಯೋಜನೆ ಪ್ರಧಾನ ಕಾಮಗಾರಿಗಳು" ರಡಿ ಮೇಲ್ಕಂಡ ಕಾಮಗಾರಿಯ ರೂ. 650.00 ಲಕ್ಷಗಳ ಮೊತ್ತದ ಅಂದಾಜಿಗೆ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ.

ಸ್ಥಳ ಪರಿಸ್ಥಿತಿಗಳಿಗನುಗುಣವಾಗಿ ರೂ. 1000.00 ಲಕ್ಷಗಳ ಮಾರ್ಪಡಿತ ಅಂದಾಜು ಪಟ್ಟಿಯನ್ನು ಸಿದ್ಧಪಡಿಸಿ, ನಬಾರ್ಡ್ ಯೋಜನೆಗಳನ್ನು ಪರಿಗಣಿಸಲು ರಚಿಸಲಾಗಿರುವ ಸಚಿವ ಸಂಪುಟ ಉಪಸಮಿತಿಯಿಂದ ನಬಾರ್ಡ್‌ನ ಆರ್.ಐ.ಡಿ.ಎಫ್–16ರಡಿ ಕೈಗೊಳ್ಳಲು ಅನುಮೋದನೆ ದೊರೆತಿರುತ್ತದೆ.

ಮೇಲೆ (3)ರಲ್ಲಿ ಓದಲಾದ ನಬಾರ್ಡ್ ಪತ್ರದಲ್ಲಿ ಈ ಕಾಮಗಾರಿಗೆ ನಬಾರ್ಡ್‌ನ ಆರ್.ಐ.ಡಿ.ಎಫ್.–16ರಡಿ ಕೆಳಕಂಡಂತೆ ಸಾಲ ಮಂಜೂರಾತಿ ದೊರೆತಿರುತ್ತದೆ.

| | |
|---|---|
| Updated Project Cost | Rs. 1000.00 Lakhs |
| NABARD Loan Sanctioned | Rs. 950.00 Lakhs |

ಲೆಕ್ಕಶೀರ್ಷಿಕೆ "4702–00–101–3–01–436 ನಬಾರ್ಡ್ ಕಾಮಗಾರಿಗಳು–ಏತ ನೀರಾವರಿ ಯೋಜನೆಗಳು" ಅಡಿ ರೂ. 1000.00 ಲಕ್ಷಗಳ ಈ ಕಾಮಗಾರಿಯ ಮಾರ್ಪಡಿತ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಪರಿಗಣಿಸಿದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 22 ಏನೀಯೋ 2011, (ತಾಂತ್ರಿಕ) ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2011**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾವೇರಿ ಜಿಲ್ಲೆ ಹಾನಗಲ್ ತಾಲ್ಲೂಕಿನ ಮಕರವಳ್ಳಿ ಏತ ನೀರಾವರಿ ಯೋಜನೆ ಕಾಮಗಾರಿಯ ರೂ. 1000.00 ಲಕ್ಷ (ರೂ. ಒಂದು ಸಾವಿರ ಲಕ್ಷ ಮಾತ್ರ) ಮೊತ್ತದ ಮಾರ್ಪಡಿತ ಅಂದಾಜು ಪಟ್ಟಿಗೆ ನಬಾರ್ಡ್‌ನ ಆರ್.ಐ.ಡಿ.ಎಫ್–16 ಯೋಜನೆಯಡಿ ಕೈಗೊಳ್ಳಲು ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1) ಕಾಮಗಾರಿಯ ಅನುಷ್ಠಾನ ಪೂರ್ವ ಹಾಗೂ ಅನುಷ್ಠಾನ ನಂತರದ ಫಲಶೃತಿಗಳನ್ನು ಹಾಗೂ ವಿಡಿಯೋ ಹಾಗೂ ಛಾಯಾಚಿತ್ರಗಳನ್ನು ದಾಖಲಿಸುವುದು.
2) ಕಾಮಗಾರಿಗಳ ವಿವಿಧ ಅನುಷ್ಠಾನ ಹಂತದ ವಿಡಿಯೋ ಹಾಗೂ ಛಾಯಚಿತ್ರಗಳನ್ನು ದಾಖಲಿಸುವುದು.
3) ಕಾಮಗಾರಿಯ ಅಂದಾಜನ್ನು ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ ಸಭೆಯ ಮುಂದೆ ಮಂಡಿಸಿ ತೀರುವಳಿ ಪಡೆಯತಕ್ಕದ್ದು.
4) ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
5) ಒಂದುವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
6) ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
7) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
8) ಕಾಮಗಾರಿ ಪೂರ್ಣಗೊಂಡ ಕೂಡಲೇ ಪೂರ್ಣತಾ–ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
9) ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
10) ತಾಂತ್ರಿಕ ಮಂಜುರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
11) ಈ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಲೋಇ 505 ಆಕೋ–1/11, ದಿನಾಂಕ 25.07.2011ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 126

**ರುದ್ರಮೂರ್ತಿ**

ಪದನಿಮಿತ್ತ, ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಸಹಕಾರ ಸಚಿವಾಲಯ

**ವಿಷಯ :** ಹೊಸದಾಗಿ ರಚನೆಗೊಂಡಿರುವ ಸಾಗರ, ಸೊರಬ ಮತ್ತು ಹೊಸನಗರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ಹುದ್ದೆಗಳನ್ನು ನಿಯೋಜಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಇ 104 ಎಂಆರ್‌ಇ (2) 2009 ದಿನಾಂಕ: 19/01/2010.

2) ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕೃಮಾಇ/371/ಸಿಬ್ಬಂದಿ-1(ಸಿ)/2010 ದಿನಾಂಕ: 18/12/2010.

**ಪ್ರಸ್ತಾವನೆ :**

ಸಾಗರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯನ್ನು ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ವಿಭಜಿಸಿ ಸಾಗರ, ಹೊಸನಗರ ಮತ್ತು ಸೊರಬ ತಾಲ್ಲೂಕುಗಳಿಗೆ ಪ್ರತ್ಯೇಕ ಮಾರುಕಟ್ಟೆ ಕ್ಷೇತ್ರಗಳನ್ನು ಸ್ಥಾಪಿಸಲಾಗಿತ್ತು.

ಕೃಷಿ ಮಾರಾಟ ನಿರ್ದೇಶಕರು, ಮೇಲೆ (2) ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಸಾಗರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ವಿವಿಧ ವೃಂದಗಳಿಗೆ ಸೇರಿದ ಒಟ್ಟು 38 ಹುದ್ದೆಗಳು ಮಂಜೂರಾಗಿದ್ದು, ಅವುಗಳ ಪೈಕಿ ತಲಾ 09 ಹುದ್ದೆಗಳನ್ನು ಸೊರಬ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಮತ್ತು ಹೊಸನಗರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ಮರು ವಿನ್ಯಾಸಗೊಳಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ರವರ ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿದ ನಂತರ ಸಾಗರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾಗಿರುವ ಒಟ್ಟು 38 ಹುದ್ದೆಗಳ ಪೈಕಿ ತಲಾ 09 ಹುದ್ದೆಗಳನ್ನು ಸೊರಬ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಮತ್ತು ಹೊಸನಗರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ಮರು ಹೊಂದಾಣಿಕೆ ಮೂಲಕ ಸ್ಥಳಾಂತರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 294 ಮಾಇಸೇ 2010, ಬೆಂಗಳೂರು, ದಿನಾಂಕ : 13ನೇ ಡಿಸೆಂಬರ್, 2011**

ಸಾಗರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾಗಿರುವ ವಿವಿಧ ವೃಂದಗಳಿಗೆ ಸೇರಿದ ಒಟ್ಟು 38 ಹುದ್ದೆಗಳನ್ನು ಸಾಗರ, ಸೊರಬ ಮತ್ತು ಹೊಸನಗರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ಅವುಗಳ ಎದುರಿಗೆ ನಮೂದಿಸಿರುವಂತೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ಮರು ಹೊಂದಾಣಿಕೆ ಮೂಲಕ ಸ್ಥಳಾಂತರಿಸಿ ಆದೇಶಿಸಿದೆ.

| ಸಾಗರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾಗಿರುವ ಒಟ್ಟು ಹುದ್ದೆಗಳ ವಿವರ | | | | ಮರು ವಿನ್ಯಾಸಗೊಳಿಸಿದ ನಂತರದ ನಿಗದಿಪಡಿಸಿದ ಹುದ್ದೆಗಳು | | |
|---|---|---|---|---|---|---|
| ಕ್ರ.ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ | ಸಾಗರ ಕೃಉಮಾಸ | ಸೊರಬ ಕೃಉಮಾಸ | ಹೊಸನಗರ ಕೃಉಮಾಸ |
| 01 | ಕಾರ್ಯದರ್ಶಿ | 01 | 20025-28275 | 01 | - | - |
| 02 | ಸಹಾಯಕ ಕಾರ್ಯದರ್ಶಿ | 01 | 11400-21600 | - | - | 01 |
| 03 | ಸಹಾಯಕ ಕಾರ್ಯದರ್ಶಿ | 01 | 10800-20025 | - | 01 | - |
| 04 | ಅಧೀಕ್ಷಕರು | 01 | 10000-18150 | 01 | - | - |
| 05 | ಲೆಕ್ಕಾಧೀಕ್ಷರು | 01 | 10000-18150 | 01 | - | - |
| 06 | ಆಂತರಿಕ ಲೆಕ್ಕ ಪರಿಶೋಧಕರು | 01 | 10000-18150 | 01 | - | - |
| 07 | ಮಾರುಕಟ್ಟೆ ಮೇಲ್ವಿಚಾರಕರು, ದರ್ಜೆ-1 | 03 | 10000-18150 | 03 | - | - |
| 08 | ಮಾರುಕಟ್ಟೆ ಮೇಲ್ವಿಚಾರಕರು, ದರ್ಜೆ-2 | 05 | 7275-13350 | 01 | 02 | 02 |
| 09 | ಪ್ರಥಮ ದರ್ಜೆ ಸಹಾಯಕರು | 01 | 7275-13350 | - | 01 | - |
| 10 | ಲೆಕ್ಕಿಗ, ದರ್ಜೆ-2 | 01 | 7275-13350 | - | - | 01 |
| 11 | ಮಾರಾಟ ಸಹಾಯಕರು | 07 | 5800-10500 | 03 | 02 | 02 |
| 12 | ದ್ವಿತೀಯ ದರ್ಜೆ ಸಹಾಯಕರು | 02 | 5800-10500 | 02 | - | - |
| 13 | ಬೆರಳಚ್ಚುಗಾರರು | 01 | 5800-10500 | 01 | - | - |
| 14 | ಚಾಲಕರು | 01 | 5800-10500 | 01 | - | - |
| 15 | ಮಾರುಕಟ್ಟೆ ಮೇಲ್ವಿಚಾರಕರು, ದರ್ಜೆ-4 | 02 | 5200-8200 | - | 01 | 01 |
| 16 | ಅಟೆಂಡರ್ | 01 | 5200-8200 | 01 | - | - |
| 17 | ಗ್ರೂಪ್-ಡಿ ನೌಕರರು | 06 | 4800-7275 | 02 | 02 | 02 |
| 18 | ಪ್ರಾಯೋಗಿಕ ಅಡಿಕೆ ವರ್ಗೀಕರಣ, ಕೇಂದ್ರ ಗ್ರೇಡಿಂಗ್ ಅಸಿಸ್ಟೆಂಟ್ | 01 | 10000-18150 | 01 | - | - |
| 19 | ವರ್ಗೀಕರಣಕಾರರು | 01 | 7275-13350 | 01 | - | - |
| | **ಒಟ್ಟು** | **38** | | **20** | **09** | **09** |

ಈ ಹುದ್ದೆಗಳಿಗೆ ತಗಲುವ ವೆಚ್ಚವನ್ನು "3475–00–107–1–02" ಲೆಕ್ಕ ಶೀರ್ಷಿಕೆಯಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 427 ವೆಚ್ಚ–2/2011 ದಿನಾಂಕ: 21/11/2011 ರ ಸಹಮತಿಯೊಂದಿಗೆ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 127

**ಸಿ.ಕೆ. ವಾಸುದೇವ ಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ–1

ಸಹಕಾರ ಇಲಾಖೆ

## ಕಾರ್ಮಿಕ ಸಚಿವಾಲಯ

**ವಿಷಯ :** ಸಿ.ಓ.ಇ. ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ಅಡ್ವಾನ್ಸ್ ಮಾಡ್ಯೂಲ್ಸ್ ಬೋಧಿಸಲು ಕಿರಿಯ ತರಬೇತಿ ಅಧಿಕಾರಿಗಳ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** **1)** ಸರ್ಕಾರಿ ಆದೇಶ ಸಂಖ್ಯೆ: ಕಾಇ 261 ಇಟಿಐ 2009 ದಿನಾಂಕ 10–11–2009.

2) ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರ ಸಂಖ್ಯೆ ಉತನಿ/ತರಬೇತಿ/ಯೋಜನೆ–3/ವಿವ–01/2009–10, ದಿನಾಂಕ: 23–12–2009 ಮತ್ತು 08–06–2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸಿ.ಓ.ಇ. ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ಅಡ್ವಾನ್ಸ್ ಮಾಡ್ಯೂಲ್ಸ್ ಬೋಧಿಸಲು ಅಗತ್ಯವಿರುವ 108 ಕಿರಿಯ ತರಬೇತಿ ಅಧಿಕಾರಿ ಹುದ್ದೆಗಳನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು.

ಮೇಲೆ(2)ರಲ್ಲಿ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರದಲ್ಲಿ ಡಿಜಿಇಟಿ ನವದೆಹಲಿ ಹಾಗೂ ವಿಶ್ವಬ್ಯಾಂಕ್ ಪ್ರತಿನಿಧಿಗಳೊಂದಿಗೆ ನಡೆದ ಜಂಟಿ ಪರಿಶೀಲನಾ ಸಭೆಯಲ್ಲಿ 6 ಮಾಡ್ಯೂಲ್ಸ್‌ಗಳ ಪೈಕಿ 3 ಮಾಡ್ಯೂಲ್ಸ್‌ಗಳನ್ನು ಆಯ್ಕೆ ಮಾಡಿಕೊಳ್ಳಬೇಕಾಗಿದ್ದು, ಅಡ್ವಾನ್ಸ್ ಮಾಡ್ಯೂಲ್ಸ್‌ಗಳನ್ನು ಬೋಧಿಸಲು ಪ್ರತಿ ಸಂಸ್ಥೆಗೆ 6ರಂತೆ, ಒಟ್ಟು 36 ಸಂಸ್ಥೆಗಳಿಗೆ 216 ಶಿಕ್ಷಕರ ಹುದ್ದೆಗಳನ್ನು ಸೃಜಿಸಲು ಕ್ರಮತೆಗೆದುಕೊಳ್ಳಲು ಸೂಚಿಸಲಾಗಿದೆಯೆಂದು ಮತ್ತು ಈಗಾಗಲೇ 108 ಹುದ್ದೆಗಳನ್ನು ಸೃಜಿಸಲಾಗಿರುವುದರಿಂದ, ಇನ್ನೂ 108 ಕಿರಿಯ ತರಬೇತಿ ಅಧಿಕಾರಿ ಹುದ್ದೆಗಳನ್ನು ಸೃಜಿಸಲು ಅನುಮತಿ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ. ಕಾಇ 462 ಇಟಿಐ 2009, ಬೆಂಗಳೂರು, ದಿನಾಂಕ: 16–12–2011**

ಸಿ.ಓ.ಇ. ಕಾರ್ಯಕ್ರಮದಡಿಯಲ್ಲಿ ಉನ್ನತೀಕರಿಸಲಾದ 36 ಸಿ.ಓ.ಇ. ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ಅಡ್ವಾನ್ಸ್ ಮಾಡ್ಯುಲ್‌ಗಳನ್ನು ಬೋಧಿಸುವುದಕ್ಕೆ ಇನ್ನೂ 36 ಕಿರಿಯ ತರಬೇತಿ ಅಧಿಕಾರಿಗಳ ಹುದ್ದೆಗಳನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 578 ವೆಚ್ಚ–9/11 ದಿನಾಂಕ: 29–11–2011ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ.ಎಸ್. ವಿಶ್ವನಾಥಪ್ಪ**

ಪೀಠಾಧಿಕಾರಿ

ಪಿ.ಆರ್. 128

ಕಾರ್ಮಿಕ ಇಲಾಖೆ

(ಉದ್ಯೋಗ ಮತ್ತು ತರಬೇತಿ)

## ಸಹಕಾರ ಸಚಿವಾಲಯ

**ವಿಷಯ :** ಶ್ರೀ ಬಸವೇಶ್ವರ ಗ್ರಾಮಾಂತರ ವಿದ್ಯಾ ಸಂಸ್ಥೆ (ರಿ), ಕೊಂಡ್ಲಿಕ್ರಾಸ್, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ ಈ ಸಂಘದ ಆಡಳಿತ ಮಂಡಳಿಯನ್ನು ರದ್ದುಗೊಳಿಸಿ ಆಡಳಿತಾಧಿಕಾರಿಯನ್ನು ನೇಮಿಸುವ ಕುರಿತು.

**ಓದಲಾಗಿದೆ :** 1. ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಆರ್‌ಸಿಎಸ್/ಎಡಿಎಂ/109/ಎಸ್‌ಓಆರ್–1/2010–11 ದಿನಾಂಕ: 05–07–2011.

**2.** ದಿನಾಂಕ: 26/07/2011 ರ ಕಾರಣ ಕೇಳುವ ನೋಟೀಸು.

**3.** ಕಾರ್ಯದರ್ಶಿ, ಶ್ರೀ ಬಸವೇಶ್ವರ ಗ್ರಾಮಾಂತರ ವಿದ್ಯಾ ಸಂಸ್ಥೆ (ರಿ), ಕೊಂಡ್ಲಿಕ್ರಾಸ್, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ ಇವರ ದಿನಾಂಕ: 10/09/2011.

**4.** ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಆರ್‌ಸಿಎಸ್/ಎಡಿಎಂ/109/ಎಸ್‌ಓಆರ್–1/2010–11, ದಿನಾಂಕ: 08/11/2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ದಿನಾಂಕ: 05/07/2011 ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರು ಶ್ರೀ ಬಸವೇಶ್ವರ ಗ್ರಾಮಾಂತರ ವಿದ್ಯಾ ಸಂಸ್ಥೆ (ರಿ), ಕೊಂಡ್ಲಿಕ್ರಾಸ್, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ ಈ ಸಂಸ್ಥೆಯ ವಿರುದ್ಧದ ಆರೋಪಗಳ ಬಗ್ಗೆ ಸಹಕಾರ ಸಂಘಗಳ ನೊಂದಣಿ ಕಾಯ್ದೆ 1960 ರ ಕಲಂ 25 ರಡಿ ಉಪ ವಿಭಾಗಾಧಿಕಾರಿಗಳು, ತುಮಕೂರು ಉಪ ವಿಭಾಗ, ತುಮಕೂರು ಇವರು ವಿಚಾರಣೆಯನ್ನು ನಡೆಸಿ ದಿನಾಂಕ: 25/10/2010 ರಂದು ವಿಚಾರಣೆ ವರದಿ ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ. ಸದರಿ ವರದಿಯಲ್ಲಿ ಸಂಘದ ಆಡಳಿತ ಮಂಡಳಿಯಲ್ಲಿ ಎರಡು ಬಣಗಳಿಲ್ಲವೆಂದು ಹಾಗೂ ಯಾವುದೇ ವಿವಾದ ಇಲವೆಂದು ದೃಢೀಕರಣ ನೀಡಿ 2009 ರಿಂದ 2011 ರ ವರೆಗೆ ಕಾರ್ಯಕಾರಿ

ಪಟ್ಟಿ ಅನುಮೋದಿಸಲು ವಿನಂತಿಸಿಕೊಂಡಿರುವುದರಿಂದ, ದಿನಾಂಕ: 25/10/2010 ರ ವಿಚಾರಣಾ ವರದಿ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ಕಲಂ 27ಎ(ಸಿ) ರ ವ್ಯಾಪ್ತಿಯಲ್ಲಿ ಆಡಳಿತಾಧಿಕಾರಿಯನ್ನು ನೇಮಕ ಮಾಡುವುದು ಅವಶ್ಯವೆಂದು ತಿಳಿಸಿರುತ್ತಾರೆ.

ಮೇಲೆ ಓದಲಾದ (2) ರ ದಿನಾಂಕ : 26/07/2011 ರ ಕಾರಣ ಕೇಳುವ ನೋಟೀಸಿನಲ್ಲಿ ಸಂಘದಲ್ಲಿ ನಡೆದಿದೆ ಎನ್ನಲಾದ ಆರೋಪಗಳ ಬಗ್ಗೆ ವಿವರಿಸುತ್ತಾ ನಿಮ್ಮ ಸಂಘಕ್ಕೆ ಕನಾರ್ಟಕ ಸಂಘಗಳ ನೋಂದಣಿ ಕಾಯ್ದೆ 1960 ಕಲಂ 27ಎ(1)ರ ಪ್ರಕಾರ ಆಡಳಿತಾಧಿಕಾರಿಯನ್ನು ಏಕೆ ನೇಮಕ ಮಾಡಬಾರದು ಎಂಬ ಬಗ್ಗೆ ನಿಮ್ಮ ಲಿಖಿತ/ಮೌಖಿಕ ಹೇಳಿಕೆಯನ್ನು ಈ ಸೂಚನಾ ಪತ್ರ ತಲುಪಿದ 15 ದಿನಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸುವಂತೆ ಇಲ್ಲವಾದಲ್ಲಿ ನಿಮ್ಮ ಹೇಳಿಕೆ ಏನೂ ಇಲ್ಲವೆಂದು ಭಾವಿಸಿ, ನಿಯಮಾನುಸಾರ ಮುಂದಿನ ಕ್ರಮ ಜರುಗಿಸಲಾಗುವುದೆಂದು ಮೇಲ್ಕಂಡ ಸಂಘದ ಅಧ್ಯಕ್ಷರು ಹಾಗೂ ಕಾರ್ಯದರ್ಶಿಗಳಿಗೆ ಸೂಚನೆ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ದಿನಾಂಕ: 26/07/2011 ರ ಕಾರಣ ಕೇಳುವ ನೋಟೀಸಿಗೆ ಕಾರ್ಯದರ್ಶಿಗಳು, ಶ್ರೀ ಬಸವೇಶ್ವರ ಗ್ರಾಮಾಂತರ ವಿದ್ಯಾ ಸಂಸ್ಥೆ (ರಿ), ಕೊಂಡ್ಲಿಕ್ರಾಸ್, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ ಇವರು ಲಿಖಿತ ಹೇಳಿಕೆಯನ್ನು ನೀಡಿ ನಮ್ಮ ಆಡಳಿತ ಮಂಡಳಿಯಲ್ಲಿ ಯಾವುದೇ ವಿವಾದ ಇರುವುದಿಲ್ಲ. ಶ್ರೀ ಎ.ಸ್.ಸಿ. ದಕ್ಷಿಣಾ ಮೂರ್ತಿಯವರ ಬೆಂಬಲಿಗರಾದ ಶ್ರೀ ಟಿ.ಆರ್. ರೇಣುಕಾ ಪ್ರಸಾದ್ ರವರಿಗೆ ವಿವಾದ ಇಲ್ಲದಿದ್ದರೂ ಆಡಳಿತ ಮಂಡಳಿಯ ಗಮನಕ್ಕೆ ತಾರದೇ ವಿವಾದ ಇದೆ ಎಂದು ತಪ್ಪು ಮಾಹಿತಿ ನೀಡಿ, ಆಡಳಿತ ಮಂಡಳಿಯ ಅಸ್ಥಿತ್ವಕ್ಕೆ ಧಕ್ಕೆ ತಂದು, ಅಧಿಕಾರ ದುರುಪಯೋಗ ಮಾಡಿಕೊಂಡಿರುವುದರಿಂದ, ವಿಚಾರಣಾ ವರದಿಯನ್ನು ತಿರಸ್ಕರಿಸಿ, ಹಾಲಿ ಇರುವ ಆಡಳಿತ ಮಂಡಳಿಯನ್ನು ಮಾನ್ಯ ಮಾಡಿ ಅದನ್ನು ಮುಂದುವರಿಸಲು ಅವಕಾಶ ಮಾಡಿಕೊಡುವಂತೆ ಕೋರಿರುತ್ತಾರೆ. ಸದರಿ ಲಿಖಿತ ಹೇಳಿಕೆಯನ್ನು ಹಾಗೂ ಕಾರಣ ಕೇಳುವ ನೋಟೀಸನ್ನು ಲಗತ್ತಿಸಿ ದಿನಾಂಕ: 12/10/2011 ರಂದು ಸಹಕಾರ ಸಂಘಗಳ ಉಪ ನಿಬಂಧಕರಿಗೆ ಪತ್ರವನ್ನು ಬರೆದು ಈ ಬಗ್ಗೆ ತಮ್ಮ ಸ್ಪಷ್ಟ ಅಭಿಪ್ರಾಯವನ್ನು ತಿಳಿಸುವಂತೆ ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (4) ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರು ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ರವರ ವಿಚಾರಣಾ ವರದಿಯನ್ನು ಆಧರಿಸಿ, ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 160 ಸಸಂನೋ 2010 ಬೆಂಗಳೂರು, ದಿನಾಂಕ : 14-12-2011.**

ಶ್ರೀ ಬಸವೇಶ್ವರ ಗ್ರಾಮಾಂತರ ವಿದ್ಯಾ ಸಂಸ್ಥೆ (ರಿ), ಕೊಂಡ್ಲಿಕ್ರಾಸ್, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ ಈ ಸಂಸ್ಥೆಯಲ್ಲಿ ನಡೆದಿದೆ ಎನ್ನಲಾದ ಆರೋಪಗಳ ಕುರಿತಂತೆ ಕರ್ನಾಟಕ ಸಂಘಗಳ ನೋದಂಣಿ ಕಾಯ್ದೆ 1960 ರ ಕಲಂ 27ಎ ರ ಪ್ರಕಾರ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರದನ್ವಯ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ತುಮಕೂರು ಇವರನ್ನು ಆಡಳಿತಾಧಿಕಾರಯನ್ನಾಗಿ ಆರು (06) ತಿಂಗಳ ಅವಧಿಗೆ ನೇಮಿಸಿ ಆದೇಶಿಸಲಾಗಿದೆ.

ಸದರಿ ಅವಧಿಯಲ್ಲಿ ಸಂಘದಲ್ಲಿ ಹಾಲಿ ಇರುವ ಸದಸ್ಯರಿಂದ ಸಂಘಕ್ಕೆ ಚುನಾವಣೆಯನ್ನು ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಆರು (06) ತಿಂಗಳ ಅವಧಿಗೆ ಇದರಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎಸ್. ವಿಶ್ವೇಶ್ವರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ-2

ಪಿ.ಆರ್. 129 ಸಹಕಾರ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರಿ ದೇವಿಪ್ರಸಾದ್, ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಪ್ರಸ್ತುತ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯ ಪುಸ್ತಕಗಳ ಸಂಘ, ಬೆಂಗಳೂರು ಇವರ ವಿರುದ್ಧದ ಶಿಸ್ತಿನ ಕ್ರಮವನ್ನು ಬಾಕಿ ಇಟ್ಟು ಸೇವೆಯಿಂದ ಅಮಾನತ್ತುಗೊಳಿಸುವ ಕುರಿತು.

**ಓದಲಾಗಿದೆ :** ಶಿಕ್ಷಣ ಇಲಾಖೆ ಕಡತ ಸಂಖ್ಯೆ ಇಡಿ 70 ಡಿಜಿಪಿ 2011

**ಪ್ರಸ್ತಾವನೆ :**

ಶ್ರೀ ದೇವಿಪ್ರಸಾದ್, ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಪ್ರಸ್ತುತ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯ ಪುಸ್ತಕಗಳ ಸಂಘ, ಬೆಂಗಳೂರು ಇವರು ಕರ್ನಾಟಕ ಪಠ್ಯ ಪುಸ್ತಕ ಸಂಘಕ್ಕೆ ಯಾವುದೇ ಕೊಟೇಷನ್‌ಗಳನ್ನು ಕರೆಯದೇ 4 ಲ್ಯಾಪ್‌ಟಾಪ್‌ಗಳನ್ನು ದುಬಾರಿ ಧರಕ್ಕೆ ಖರೀದಿಸಿರುವುದು, ಕಛೇರಿಗೆ ಅವಶ್ಯಕತೆ ಇಲ್ಲದಿದ್ದರೂ 16 ಹೊಸ ಕಂಪ್ಯೂಟರ್‌ಗಳನ್ನು ಹಾಗೂ 4 ಪ್ರಿಂಟರ್‌ಗಳನ್ನು ದುಬಾರಿ ಬೆಲೆಗೆ ಖರೀದಿ ಮಾಡಿರುವುದು ಮತ್ತು ನೆಟ್ ವರ್ಕಿಂಗ್ ಸೌಲಭ್ಯಕ್ಕೆ ರೂ. 1.25 ಲಕ್ಷದ ಕೆಲಸವನ್ನು ಯೂನಿಕ್ ಎಲೆಕ್ಟ್ರಾನಿಕ್ಸ್ ಸಿಸ್ಟಂ ರವರಿಂದ ಮಾಡಿಸಿರುವ ಬಗ್ಗೆ, ಕಾರ್ಯಕಾರಿ ಸಮಿತಿಯಲ್ಲಿ ಅನುಮತಿ ಪಡೆಯದೇ ಟೆಕ್ಸ್ಟ್‌ಬುಕ್ ಟ್ರಾಕಿಂಗ್ ಸಿಸ್ಟಂ ಸಾಫ್ಟ್ ವೇರ್ ಸಿದ್ದಪಡಿಸಲು ರೂ. 1.88 ಲಕ್ಷ ವೆಚ್ಚ ಪಾವತಿಸಿರುವುದು, ದುಬಾರಿ ಬೆಲೆಗೆ ಕಾರನ್ನು ಟ್ರಾವಲ್ಸ್ ನಿಂದ ಬಾಡಿಗೆಗೆ ಪಡೆದು ಕಮಿಷನ್ ಪಡೆಯುತ್ತಿರುವ ಆರೋಪ, ಮುದ್ರಕರ ಬಿಟ್ಟು ಪಾವತಿಸಲು ಜೇಷ್ಠತಾ ನಿಯಮ ಅನುಸರಿಸದೇ ಇರುವುದು, ಪಠ್ಯ ಪುಸ್ತಕ ಸಂಘಕ್ಕೆ 2012-13ನೇ ಸಾಲಿನ ಪಠ್ಯ ಪುಸ್ತಕ ಮುದ್ರಣಕ್ಕಾಗಿ ಚಾರ್ಟರ್ಡ್ ಅಕೌಂಟೆಂಟ್ ಆಗಿ ನೇಮಿಸಿಕೊಂಡಿರುವ ಆರ್ ಮತ್ತು ಆರ್ ಕಂಪನಿಗೆ ರೂ. 75,000/- ಗಳನ್ನು ಶುಲ್ಕವಾಗಿ ಪಾವತಿಸಲು ಕಡತವನ್ನು ಮಂಡಿಸಲಾಗಿರುವುದು ಇವೇ ಮೊದಲಾದ ಆರೋಪಗಳನ್ನು ಶ್ರೀ ದೇವಿಪ್ರಸಾದ್, ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಪ್ರಸ್ತುತ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯ ಪುಸ್ತಕಗಳ ಸಂಘ, ಬೆಂಗಳೂರು ಅವರ ವಿರುದ್ಧ ಮಾಡಲಾಗಿದೆ. ಈ ಆರೋಪಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಾಮಾವಳಿ 1957ರ ಅನ್ವಯ ಶ್ರಿಸ್ತುಕ್ರಮವನ್ನು ಜರುಗಿಸಲು ಸರ್ಕಾರವು ಉದ್ದೇಶಿಸಿರುವುದರಿಂದಲೂ, ಶಿಸ್ತಿನ ಕ್ರಮವನ್ನು ಬಾಕಿ ಇಟ್ಟು ಶ್ರೀ ದೇವಿಪ್ರಸಾದ್, ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಪ್ರಸ್ತುತ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯ ಪುಸ್ತಕಗಳ ಸಂಘ, ಬೆಂಗಳೂರು ಇವರನ್ನು ಅಮಾನತ್ತಿನಲ್ಲಿಡುವುದು ಅಗತ್ಯವೆಂದು ಸರ್ಕಾರವು ಭಾವಿಸಿರುವುದರಿಂದಲೂ, ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 14 ಇಮುವಿ 2011 ಬೆಂಗಳೂರು, ದಿನಾಂಕ : 17-12-2011.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ನಿಯಮ 10(1)(ಡಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ದೇವಿಪ್ರಸಾದ್, ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಪ್ರಸ್ತುತ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯ ಪುಸ್ತಕಗಳ ಸಂಘ, ಬೆಂಗಳೂರು, ಇವರನ್ನು ಅವರ ವಿರುದ್ಧದ ಶಿಸ್ತಿನ ಕ್ರಮವನ್ನು ಬಾಕಿ ಇಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ದೇವಿಪ್ರಸಾದ್, ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಪ್ರಸ್ತುತ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯ ಪುಸ್ತಕಗಳ ಸಂಘ, ಬೆಂಗಳೂರು, ಅವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98 ನೇ ನಿಯಮದ ಅನ್ವಯ ಜೀವನಾಧಾರ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ದೇವಿಪ್ರಸಾದ್, ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಪ್ರಸ್ತುತ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯ ಪುಸ್ತಕಗಳ ಸಂಘ, ಬೆಂಗಳೂರು, ಅವರು ತಾವು ಕಾರ್ಯನಿರ್ವಹಿಸುವ ಕೇಂದ್ರ ಸ್ಥಾನವನ್ನು ಸಕ್ಷಮ ಪ್ರಾಧಿಕಾರಿಯ ಅನುಮತಿ ಪಡೆಯದೇ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವೆಗಳು-3)

ಪಿ.ಆರ್. 130

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಕೇಂದ್ರ ಸರ್ಕಾರದ ಸ್ವಾಧಾರ ಗೃಹ ಯೋಜನೆಯಡಿಯಲ್ಲಿ ರಾಜ್ಯ ಮಟ್ಟದ ಅಧಿಕಾರಯುಕ್ತ ಸಮಿತಿ/ಜಿಲ್ಲಾ ಮಟ್ಟದ ಪರಿಶೀಲನಾ ಸಮಿತಿ ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ :** 1. ದಿನಾಂಕ: 29-07-2003ರ ಆದೇಶ ಸಂಖ್ಯೆ: ಮಮಇ 273 ಮಮಅ 2003

2. ದಿನಾಂಕ: 24-11-2011 ಮತ್ತು 15-12-2011ರ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ: ಮಮಅಇ: ವಿಘ: ಸ್ವಾಗೃ: 17: 11-12

**ಪ್ರಸ್ತಾವನೆ :**

ಕೇಂದ್ರ ಸರ್ಕಾರದ ಸ್ವಾಧಾರ ಯೋಜನೆಯಡಿಯಲ್ಲಿ ಸ್ವಯಂ ಸೇವಾ ಸಂಸ್ಥೆಗಳು ಸಲ್ಲಿಸುವ ಪ್ರಸ್ತಾವನೆಗಳನ್ನು ಪರಿಶೀಲಿಸಿ ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಕಳುಹಿಸಲು ಅಧ್ಯಕ್ಷರು/ಸದಸ್ಯರನ್ನೊಳಗೊಂಡ ರಾಜ್ಯಮಟ್ಟದ ಅಧಿಕಾರಿಯುಕ್ತ ಸಮಿತಿಯನ್ನು ಹಾಗೂ ಕೇಂದ್ರ ಸರ್ಕಾರದಿಂದ ಮಂಜೂರಾದಂತಹ ಸಂಸ್ಥೆಗಳ ಕಾರ್ಯವೈಖರಿಯನ್ನು ಪರಿಶೀಲಿಸುವ ಸಲುವಾಗಿ ಜಿಲ್ಲಾ ಮಟ್ಟದ ಸಮಿತಿಯನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ರಚಿಸಲಾಗಿದೆ.

ಸಂಕಷ್ಟದಲ್ಲಿರುವ ಮಹಿಳೆಯರಿಗೆ ನೆರವಾಗಲು ಕೇಂದ್ರ ಸರ್ಕಾರವು ಸ್ವಾಧಾರ ಹಾಗೂ ಅಲ್ಪಾವಧಿ ವಸತಿಗೃಹ ಯೋಜನೆಗಳನ್ನು ವಿಲೀನಗೊಳಿಸಿ, "ಸ್ವಾಧಾರ ಗೃಹ" ಎಂಬ ನೂತನ ಯೋಜನೆಯನ್ನು ಜಾರಿಗೊಳಿಸಿರುತ್ತದೆ. ಯೋಜನಾ ಮಾರ್ಗಸೂಚಿಯಲ್ಲಿ ಸೂಚಿಸಿರುವಂತೆ ಜಿಲ್ಲಾ ಮತ್ತು ರಾಜ್ಯ ಮಟ್ಟದ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಬೇಕಾಗಿದ್ದು, ನೂತನ ಯೋಜನೆಯಲ್ಲಿ ರಾಜ್ಯಮಟ್ಟದ ಅಧಿಕಾರ ಸಮಿತಿಯು ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ರಚಿಸಬೇಕಾಗಿದೆ ಹಾಗೂ ಜಿಲ್ಲಾ ಮಟ್ಟದಲ್ಲಿ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಬೇಕಾಗಿದೆ ಎಂದು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರಗಳಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ : ಮಮಇ 278 ಮಮಅ 2011 ಬೆಂಗಳೂರು, ದಿನಾಂಕ : 16-12-2011.**

ಮೇಲಿನ ಪ್ರಸ್ತಾವನೆಯಲ್ಲಿ ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಸಂಕಷ್ಟದಲ್ಲಿರುವ ಮಹಿಳೆಯರಿಗೆ ನೆರವಾಗಲು ಕೇಂದ್ರ ಸರ್ಕಾರವು ಸ್ವಧಾರ ಹಾಗೂ ಅಲ್ಪಾವಧಿ ವಸತಿಗೃಹ ಯೋಜನೆಗಳನ್ನು ವಿಲೀನಗೊಳಿಸಿ ಸ್ವಾಧಾರ ಗೃಹ ಎಂಬ ನೂತನ ಯೋಜನೆಯನ್ನು ಜಾರಿಗೊಳಿಸಿರುವ ಹಿನ್ನೆಲೆಯಲ್ಲಿ ಸ್ವಯಂ ಸೇವಾ ಸಂಸ್ಥೆಗಳು ಸಲ್ಲಿಸುವ ಪ್ರಸ್ತಾವನೆಗಳನ್ನು ಪರಿಶೀಲಿಸಿ ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಕಳುಹಿಸಲು ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡ ರಾಜ್ಯಮಟ್ಟದ ಅಧಿಕಾರಯುಕ್ತ ಸಮಿತಿಯನ್ನು ಹಾಗೂ ಕೇಂದ್ರ ಸರ್ಕಾರದಿಂದ ಮಂಜೂರಾದಂತಹ ಸಂಸ್ಥೆಗಳ ಕಾರ್ಯವೈಖರಿಯನ್ನು ಪರಿಶೀಲಿಸುವ ಸಲುವಾಗಿ ಜಿಲ್ಲಾ ಮಟ್ಟದ ಸಮಿತಿಯನ್ನು ಪುನರ್ ರಚಿಸಿ ಆದೇಶ ಹೊರಡಿಸಿದೆ.

**ಅ) ರಾಜ್ಯಮಟ್ಟದ ಅಧಿಕಾರಯುಕ್ತ ಸಮಿತಿ:**

| | | | |
|---|---|---|---|
| 1. | ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ. | – | ಅಧ್ಯಕ್ಷರು |
| 2. | ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | – | ಸದಸ್ಯರು |
| 3. | ಮುಖ್ಯ ಇಂಜಿನಿಯರ್ (ಕಟ್ಟಡಗಳು) | – | ಸದಸ್ಯರು |
| 4. | ಕಾರ್ಯದರ್ಶಿ, ಕರ್ನಾಟಕ ರಾಜ್ಯ ಸಮಾಜ ಕಲ್ಯಾಣ ಸಲಹಾ ಮಂಡಳಿ | – | ಸದಸ್ಯರು |
| 5. | ಆಂತರಿಕ ಆರ್ಥಿಕ ಸಲಹೆಗಾರರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | – | ಸದಸ್ಯರು |
| 6. | ಸರ್ಕಾರದ ಜಂಟಿ ಕಾರ್ಯದರ್ಶಿ/ಉಪಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | – | ಸದಸ್ಯ-ಕಾರ್ಯದರ್ಶಿ |

**ಆ) ಜಿಲ್ಲಾ ಮಟ್ಟದ ಜಿಲ್ಲಾ ಪರಿಶೀಲನಾ ಸಮಿತಿ:**

| | | |
|---|---|---|
| 1. ಜಿಲ್ಲಾಧಿಕಾರಿಗಳು | – | ಅಧ್ಯಕ್ಷರು |
| 2. ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ | – | ಸದಸ್ಯರು |
| 3. ಜಿಲ್ಲಾ ಪೊಲೀಸ್ ಅಧೀಕ್ಷಕರು | – | ಸದಸ್ಯರು |
| 4. ಜಿಲ್ಲಾ ಆರೋಗ್ಯಾಧಿಕಾರಿಗಳು/ಜಿಲ್ಲಾ ಸರ್ಜನ್ | – | ಸದಸ್ಯರು |
| 5. ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರದ ಪ್ರತಿನಿಧಿ | – | ಸದಸ್ಯರು |
| 6. ಮಹಿಳಾ ಕಲ್ಯಾಣ ಕ್ಷೇತ್ರದಲ್ಲಿ ಕ್ರಿಯಾಶೀಲವಾಗಿ ತೊಡಗಿಸಿಕೊಂಡ ಮಹಿಳೆ (ಜಿಲ್ಲಾಧಿಕಾರಿಯವರಿಂದ ನೇಮಿಸುವುದು) | – | ಸದಸ್ಯರು |
| 7. ಪುರಸಭೆ ಅಥವಾ ನಗರ ಸಭಾ ಪ್ರತಿನಿಧಿ/ | – | ಸದಸ್ಯರು |
| 8. ಜಿಲ್ಲಾಧಿಕಾರಿಗಳಿಂದ ನೇಮಕವಾದ ಒಬ್ಬ ವಿಶೇಷ ಪ್ರತಿನಿಧಿ (Eliminated person) | – | ಸದಸ್ಯರು |
| 9. ಜಿಲ್ಲಾ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | – | ಸದಸ್ಯ–ಕಾರ್ಯದರ್ಶಿ |

ಜಿಲ್ಲಾ ಮಟ್ಟದ ಸಮಿತಿಯು ಕನಿಷ್ಠ ಇಬ್ಬರು ಮಹಿಳಾ ಸದಸ್ಯರನ್ನು ಹೊಂದಿರಲು ಸೂಚಿಸಿದೆ ಹಾಗೂ ವರ್ಷದಲ್ಲಿ ಎರಡು ಬಾರಿಯಾದರೂ ಸಭೆ ಸೇರಿ ಚರ್ಚಿಸಬೇಕಾಗಿರುತ್ತದೆ.

**ಜಿಲ್ಲಾ ಸಮಿತಿಯು ಈ ಕೆಳಗಿನಂತೆ ಕಾರ್ಯವನ್ನು ನಿರ್ವಹಿಸಬೇಕಾಗುತ್ತದೆ:**

1. ಕೇಂದ್ರ ಸರ್ಕಾರದಿಂದ ಮಂಜೂರಾದಂತಹ ಕೇಂದ್ರಗಳ ಕಾರ್ಯವೈಖರಿಯನ್ನು ಪರಿಶೀಲಿಸುವುದು.
2. ಸಂಸ್ಥೆಯ ಪ್ರಸ್ತಾವನೆಗಳನ್ನು ಸ್ವೀಕರಿಸುವುದು, ಮಂಜೂರಾತಿಗಾಗಿ ಸಲ್ಲಿಸುವುದು ಹಾಗೂ ಶಿಫಾರಸ್ಸು ಮಾಡುವುದು.
3. ಅನುದಾನದ ಕಂತುಗಳನ್ನು ಬಿಡುಗಡೆ ಮಾಡಲು ಶಿಫಾರಸ್ಸು ಮಾಡುವುದು.
4. ನಿಯತಕಾಲಿಕವಾಗಿ ಕೇಂದ್ರಗಳ ಕಾರ್ಯವೈಖರಿ ಬಗ್ಗೆ ಮೇಲುಸ್ತುವಾರಿ ಮಾಡುವುದು.
5. ನಿವಾಸಿಗಳ ಪುರ್ನವಸತಿಗಾಗಿ ಸೂಕ್ತ ಸಲಹೆಗಳನ್ನು ನೀಡುವುದು ಹಾಗೂ ತೆಗೆದುಕೊಂಡ ಕ್ರಮದ ಪರಿಶೀಲನೆ ನಡೆಸುವುದು.
6. ನಿವಾಸಿಗಳ ಸುರಕ್ಷತೆಯ ಬಗ್ಗೆ ತೆಗೆದುಕೊಂಡ ಕ್ರಮಗಳ ಪರಿಶೀಲನೆ ಮಾಡುವುದು.
7. ನಿವಾಸಿಗಳಿಗೆ ನಿಡುತ್ತಿರುವ ಸೌಕರ್ಯಗಳನ್ನು ಪರಿಶೀಲಿಸುವುದು.
8. ಸಮುದಾಯ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದಕ್ಕೆ ಪ್ರೋತ್ಸಾಹ ನೀಡುವುದು.
9. ಸರ್ಕಾರದ ಇತರೆ ಯೋಜನೆಗಳೊಂದಿಗೆ ಸಂಪರ್ಕ ಕಲ್ಪಿಸುವುದು.
10. ಯೋಜನೆಯ ಬಗ್ಗೆ ಸಾರ್ವಜನಿಕರಲ್ಲಿ ಅರಿವು ಮೂಡಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಎನ್. ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ–1

ಪಿ.ಆರ್. 131 ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಎ.ಮರೀಗೌಡ ಕೆಎಎಸ್ (ಕಿರಿಯ ಶ್ರೇಣಿ). ಹಿಂದಿನ ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ರಾಮನಗರ ಜಿಲ್ಲೆ, ರಾಮನಗರ ಇವರ ವಿರುದ್ಧ ಲಂಚ ನಿರೋಧ ಕಾಯ್ದೆ, 1988 ರಡಿ ದಾಖಲಾದ ಪ್ರಕರಣದ ಅಭಿಯೋಜನಾ ಮಂಜೂರಾತಿ ಪರಿಷ್ಕೃತ ಆದೇಶ.

**ಓದಲಾಗಿದೆ :**
1. ಅರಕ್ಷಕ ಉಪಾಧೀಕ್ಷಕರು ಹಾಗೂ ತನಿಖಾಧಿಕಾರಿಗಳು, ಕರ್ನಾಟಕ ಲೋಕಾಯುಕ್ತ ರಾಮನಗರ ಜಿಲ್ಲೆ, ರಾಮನಗರ ಇವರ ಅಂತಿಮ ವರದಿ ಸಂಖ್ಯೆ: ಕಲೋ/ರಾಜಿ/ಮೊಸಂ 03/2009 (ಅಂತಿಮ ವರದಿ) , ದಿನಾಂಕ: 10–12–10
2. ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ: 20–01–11ರ ಪತ್ರ ಸಂಖ್ಯೆ: Lok/INV(G)/BD-33/ Crime-33/CR-03/2009/ ರಾಮನಗರ
3. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ: 17–10–11ರ ಪತ್ರ ಸಂಖ್ಯೆ: Lok/INV(G)/BD-33/CR-03/2009/ ರಾಮನಗರ
4. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ: 12–12–11ರ ಪತ್ರ ಸಂಖ್ಯೆ: Lok/INV(G)/BD-33/CR-03/2009/ ರಾಮನಗರ

**ಪ್ರಸ್ತಾವನೆ :**

ಶ್ರೀ ಎ. ಮರೀಗೌಡ, ಕೆಎಎಸ್ (ಕಿರಿಯ ಶ್ರೇಣಿ) ಹಿಂದಿನ ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ರಾಮನಗರ ಜಿಲ್ಲೆ, ರಾಮನಗರ ಇವರ ವಿರುದ್ಧ ಮೊಕ್ಕದ್ದಮೆ ಸಂಖ್ಯೆ: 03/2009 ರಲ್ಲಿ ಕರ್ನಾಟಕ ಲೋಕಾಯುಕ್ತ, ರಾಮನಗರ ಜಿಲ್ಲಾ ಪೋಲಿಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಹೆಚ್ಚುವರಿ ಪೋಲಿಸ್ ಮಹಾ ನಿರ್ದೇಶಕರು, ಪೋಲಿಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ: 20–01–11 (ಮೇಲೆ ಓದಲಾದ

ಕ್ರಮಸಂಖ್ಯೆ–2) ರೊಂದಿಗೆ ಕಳುಹಿಸುತ್ತಾ, ಆಪಾದಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ, 1988 ರ 19 ಕಲಂನಡಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

2. ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರ ಸಂಖ್ಯೆ: Lok/INV(G)/BD-33/ Crime-33/CR-03/2009/ ರಾಮನಗರ, ದಿನಾಂಕ : 20–01–11 ರೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1. ಶ್ರೀ ಜಿ. ಎಸ್ ವಿಶಾಲಾಕ್ಷ @ ರವಿ ಬಿನ್ ಜಿ. ಎಸ್. ಸಿದ್ದಯ್ಯ ನ್ಯಾಯಬೆಲೆ ಅಂಗಡಿ ವ್ಯಾಪಾರ, ವಾಸ : ಗಬ್ಬಾಡಿ ಗ್ರಾಮ, ಹಾರೋಹಳ್ಳಿ ಹೋಬಳಿ, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ ರವರ ಫಿರ್ಯಾದಿ ದಿನಾಂಕ: 03–06–09.
2. ಪ್ರಥಮ ವರ್ತಮಾನ ವರದಿ ಕರ್ನಾಟಕ ಲೋಕಾಯುಕ್ತ ಪೋಲಿಸ್ ಠಾಣೆ, ರಾಮನಗರ ಪ್ರಕರಣ ಸಂಖ್ಯೆ: 03/2009, ದಿನಾಂಕ: 03–06–2009.
3. ಪ್ರಾಯೋಗಿಕ ಪಂಚನಾಮೆ ದಿನಾಂಕ 03–06–2009.
4. ಟ್ರ್ಯಾಪ್ ಮಹಜರ್ ದಿನಾಂಕ: 03––06–2009.
5. ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: PHI/CME/LOK/76/09-10, dt. 19-08-09.
6. ಕೃತ್ಯ ನಡೆದ ಸ್ಥಳದ ನಕಾಶೆ
7. ಸಾಕ್ಷಿಗಳ ಹೇಳಿಕೆಗಳು: (1) ಶ್ರೀ ವಿಶಾಲಾಕ್ಷ @ ರವಿ, ಫಿರ್ಯಾದುದಾರರು (2) ಶ್ರೀ ಪಿ. ಸುನೀಲ್ ಕುಮಾರ್, ನೆರಳು ಸಾಕ್ಷಿದಾರರು (3) ಶ್ರೀ ಟಿ. ಹೆಚ್ ನಿರಂಜನಗೌಡ, ಪಂಚ ಸಾಕ್ಷಿದಾರರು (4) ಶ್ರೀ ಆರ್. ರಂಗಯ್ಯ, (5) ಶ್ರೀ ಸಿ. ಪರಶಿವಮೂರ್ತಿ, (6) ಶ್ರೀ ಜಿ. ಎಸ್. ಸಿದ್ದಯ್ಯ (7) ಶ್ರೀ ಪಿ. ಕುಮಾರ್ (8) ಶ್ರೀ ಶ್ಯಾಮು (9) ಶ್ರೀ ರವಿ ತಿರ್ಲಾಪುರ (10) ಶ್ರೀ ರಾಮಣ್ಣ (11) ಶ್ರೀ ಅಪ್ಸರ್ ಪಾಷ (12) ಶ್ರೀ ಬಿ.ಜೆ. ಶೇಷಗಿರಿ, ಸಹಾಯಕ ರಾಸಾಯನಿಕ ತಜ್ಞರು (13) ಶ್ರೀ ಪುರ್ಲಿ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು (14) ಶ್ರೀ ಕಾಶಿರಾಂ ಪವಾರ್, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು (15) ಶ್ರೀ ಡಿ.ಪಿ. ಪ್ರಸನ್ನ (16) ಶ್ರೀ ಬಿ. ಶಿವಕುಮಾರಸ್ವಾಮಿ, ಸಿಹೆಚ್‌ಸಿ, (17) ಶ್ರೀ ಎಸ್. ಟಿ. ಬೋರೇಗೌಡ, ಸಿಪಿಸಿ (18) ಶ್ರೀ ಹೆಚ್ ಕೆ. ಸುರೇಶ್, ಸಿಪಿಸಿ (19) ಶ್ರೀಮತಿ ಶಶಿಕಲ, ಮಹಿಳಾ ಪಿಸಿ (20) ಶ್ರೀ ಡಿ ಕೃಷ್ಣಮೂರ್ತಿ, ಸಿಪಿಸಿ ಮತ್ತು (21) ಶ್ರೀ ಕೆ. ಬೀರಯ್ಯ ಸಿಪಿಸಿ.
8. ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳ ಸಂಖ್ಯೆ: 14 (ತನಿಖಾ ವರದಿಯ D-10) ವಿಷಯ: ಫಿರ್ಯಾದುದಾರರ ತಂದೆಯ ಹೆಸರಿನಲ್ಲಿರುವ ನ್ಯಾಯಬೆಲೆ ಅಂಗಡಿಯ ಲೈಸನ್ಸನ್ನು ಅಮಾನತ್ತುಪಡಿಸುವ ಬಗ್ಗೆ.
9. ಆಪಾದಿತರ ಸಮಜಾಯಿಷಿ ಹೇಳಿಕೆಗಳು: ಶ್ರೀ ಎ. ಮರೀಗೌಡ (ತನಿಖಾ ವರದಿಯ D-8)

3. ತನಿಖಾಧಿಕಾರಿಗಳಾದ ಶ್ರೀ ಹೆಚ್ ಮಂಜಪ್ಪ, ಪೋಲೀಸ್ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ರಾಮನಗರ ಜಿಲ್ಲೆ, ರಾಮನಗರ ಇವರು ಶ್ರೀ ಎ. ಮರೀಗೌಡ, ಹಿಂದಿನ ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ರಾಮನಗರ ಜಿಲ್ಲೆ, ರಾಮನಗರ ರವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ, ರಾಮನಗರ ಜಿಲ್ಲಾ ಪೋಲೀಸ್ ಠಾಣೆಯಲ್ಲಿ ಗುನ್ನೆ ಸಂಖ್ಯೆ: 03/2009 ರಲ್ಲಿ ಲಂಚ ನಿರೋಧಕ ಕಾಯ್ದೆ, 1988 ರ ಕಲಂ 7, 13(1)ಡಿ ರ ಜೊತೆಯಲ್ಲಿ ಓದಲಾದ ಕಲಂ 13(2) ರಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

4. ಅಪಾದಿತರಾದ ಶ್ರೀ ಎ. ಮರೀಗೌಡ, ಹಿಂದಿನ ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಇವರು ಫಿರ್ಯಾದಿಯಾದ ಶ್ರೀ ಜಿ.ಎಸ್. ವಿಶಾಲಾಕ್ಷ @ ರವಿ ಬಿನ್ ಜಿ. ಎಸ್. ಸಿದ್ದಯ್ಯ, ನ್ಯಾಯಬೆಲೆ ಅಂಗಡಿ ವ್ಯಾಪಾರ, ವಾಸ: ಗಬ್ಬಾಡಿ ಗ್ರಾಮ, ಹಾರೋಹಳ್ಳಿ ಹೋಬಳಿ, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ ಇವರ ನ್ಯಾಯ ಬೆಲೆ ಅಂಗಡಿಯ ಲೈಸನ್ಸನ್ನು ಅಮಾನತ್ತುಪಡಿಸದಿರುವ ಸರ್ಕಾರಿ ಕೆಲಸವನ್ನು ಮಾಡಲು ರೂ. 10000–00 (ಹತ್ತು ಸಾವಿರ ರೂಪಾಯಿಗಳು) ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸಾರ್ವಜನಿಕ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ವ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ: 03––06–2009 ರಂದು ಬೆಂಗಳೂರು–ಮೈಸೂರು ರಸ್ತೆ, ಲೋಕರುಚಿ (ಕಾಮತ್) ಹೋಟಲ್ ಕಾಂಪೌಂಡ್ ಬಳಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ಎ. ಮರೀಗೌಡ, ಹಿಂದಿನ ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ರಾಮನಗರ ಜಿಲ್ಲೆ ರಾಮನಗರ ಇವರು ಅಕ್ರಮ ಸಂಭಾವನೆಯಾದ ರೂ. 10000–00 ಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಸಾರ್ವಜನಿಕ ಅಧಿಕಾರಿಯ ಬಲಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೆಟ್ ದ್ರಾವಣದಲ್ಲಿ ಮೂರ್ಜನೆ ಮಾಡಿ ಫಿನಾಪ್ತಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸಾರ್ವಜನಿಕ ಅಧಿಕಾರಿ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ. 10000–00 ಗಳನ್ನು ಪಡೆದ ಶ್ರೀ ಎ. ಮರೀಗೌಡರನ್ನು ತನಿಖಾ ತಂಡವು ಹಿಡಿದುಕೊಂಡ ಕೂಡಲೇ ಆರೋಪಿತರು ಲಂಚದ ಹಣವನ್ನು ತಮ್ಮ ಜೀಪಿನ ಸೀಟಿನ ಕೆಳಗೆ ಎಸಿದಿದ್ದುದನ್ನು ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

5. ಮೇಲ್ಕಂಡ ತನಿಖಾ ವರದಿ ಹಾಗೂ ಸಾಕ್ಷ್ಯಾಧಾರಗಳನ್ನು ಸಕ್ಷಮ ಪ್ರಾಧಿಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಫಿರ್ಯಾದಿಯು ಆರೋಪಿ ಶ್ರೀ ಮರೀಗೌಡ ರವರೊಂದಿಗೆ ಮತ್ತು ಪ್ರಕರಣದ ಸಾಕ್ಷಿ ಶ್ರೀ ಸಿ. ಪರಶಿವಮೂರ್ತಿ ರವರೊಂದಿಗೆ ನಡೆಸಿದ ದೂರವಾಣಿ ಸಂಭಾಷಣೆಯಿಂದ ಆರೋಪಿತ ಅಧಿಕಾರಿಯು ಲಂಚದ ಹಣಕ್ಕೆ ಬೇಡಿಕೆ ಇಟ್ಟಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಅಲ್ಲದೆ ಆರೋಪಿತ ಅಧಿಕಾರಿಯು, ಲಂಚದ ಹಣವನ್ನು ತನ್ನ ಕೈಯಿಂದ ಪಡೆದಿದ್ದಾಗ, ತನಿಖಾ ತಂಡವು ಹಿಡಿದುಕೊಂಡಾಗ ಹಣವನ್ನು ಜೀಪು ಸೀಟಿನ ಕೆಳಭಾಗಕ್ಕೆ ಎಸೆದಿರುವುದನ್ನು ಗಮನಿಸಿದಲ್ಲಿ, ಅಕ್ರಮ ಹಣವನ್ನು ಪಡೆದಿರುವುದು ದೃಢಪಡುತ್ತದೆ ಹಾಗೂ ಕಂಡಿಕೆ 2 ರಲ್ಲಿರುವ ಪೂರಕ ದಾಖಲೆಗಳನ್ನು

ಪರಿಶೀಲಿಸಿದ ನಂತರ ಶ್ರೀ ಎ ಮರೀಗೌಡ ರವರನ್ನು ಲಂಚ ನಿರೋಧಕ ಕಾಯ್ದೆಯಡಿ ಅಭೀಯೋಜನೆಗೆ ಒಳಪಡಿಸಲು ಸಮರ್ಥನಿಯ ಕಾರಣಗಳು ಇರುವುದನ್ನು ಸರ್ಕಾರವು ಮನಗಂಡಿರುತ್ತದೆ.

6. ಈ ಎಲ್ಲಾ ಕಾರಣಗಳಿಂದ ಅಪಾದಿತರು ಲಂಚ ನಿರೋಧ ಕಾಯ್ದೆ 1988 ರ ಕಲಂ 7 13(1)(d) ರ ಜೊತೆಗೆ ಓದಲಾದ ಕಲಂ 13(2) ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಅದ್ದರಿಂದ, ಇವರನ್ನು ಲಂಚ ನಿರೋಧ ಕಾಯ್ದೆ 1988 ರ ಕಲಂ 7 13(1)(d) ರ ಜೊತೆಗೆ ಓದಲಾದ ಕಲಂ 13(2) ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರವು ಭಾವಿಸಿದೆ.

7. ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತನನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. ಅದ್ದರಿಂದ, ಲಂಚ ನಿರೋಧಕ ಕಾಯ್ದೆ, 1988 ರ ಕಲಂ 19(ಸಿ) ರ ಅಡಿ ಆಪಾದಿತ ಸಾರ್ವಜನಿಕ ಅಧಿಕಾರಿ ಶ್ರೀ ಎ. ಮರೀಗೌಡ, ಕೆಎಎಸ್ (ಕಿರಿಯ ಶ್ರೇಣಿ), ಹಿಂದಿನ ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ರಾಮನಗರ ಜಿಲ್ಲೆ ರಾಮನಗರ ರವರನ್ನು ಕಲಂ 7 ಮತ್ತು 13(1)(d) ರ ಜೊತೆಗೆ ಓದಲಾದ ಕಲಂ 13(2) ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರನ್ನು ಸರ್ಕಾರವು ಹೊಂದಿರುತ್ತದೆ.

8. ಮೇಲ್ಕಂಡ ಪ್ರಸ್ತಾವನೆಯಂತೆ, ಶ್ರೀ ಎ ಮರೀಗೌಡ, ಕೆಎಎಸ್ (ಕಿರಿಯ ಶ್ರೇಣಿ) ಇವರನ್ನು ದಿನಾಂಕ : 21-09-11 ರ ಆದೇಶ ಸಂಖ್ಯೆ: ಸಿಆಸುಇ 017 ಕೆಇವಿ 09 ರಲ್ಲಿ ಅಭಿಯೋಜನೆಗೆ ಒಳಪಡಿಸಲು ಸರ್ಕಾರದ ಅನುಮೋದನೆ ನೀಡಲಾಗಿದ್ದು, ಈ ಆದೇಶದ ಪ್ರಸ್ತಾವನೆಯ ಭಾಗದ ಕಂಡಿಕೆ 7 ರ ಎರಡನೇ ಸಾಲಿನಲಿ ನಮೂದಿಸಿರುವ ಕಲಂ 19(ಸಿ) ಎಂಬುದರ ಬದಲಾಗಿ, ಕಲಂ 19(1)(ಬಿ) ಎಂದು ನಮೂದಿಸಿ ಪರಿಷ್ಕರಿಸಿದ ಅಭಿಯೋಜನಾ ಮಂಜೂರಾತಿ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ಕೋರಲಾದಂತೆ, ದಿನಾಂಕ: 25-11-11 ರ ಪರಿಷ್ಕರಿಸಿದ ಆದೇಶ ಸಂಖ್ಯೆ: ಸಿಆಸುಇ 017 ಕೆಇವಿ 09 ಹೊರಡಿಸಲಾಗಿದೆ.

9. ದಿನಾಂಕ: 25-11-11 ರ ಪರಿಷ್ಕರಿಸಿದ ಆದೇಶ ಸಂಖ್ಯೆ: ಸಿಆಸುಇ 017 ಕೆಇವಿ 09 ರ ಆದೇಶ ಭಾಗದಲ್ಲಿನ ಕಂಡಿಕೆ 2 ರಲ್ಲಿ ದಿನಾಂಕ: 21-09-11 ಎಂದು (ದಿನಾಂಕ: 25-11-11 ಎಂದು ನಮೂದಾಗುವ ಬದಲು) ತಪ್ಪಾಗಿ ನಮೂದಾಗಿರುವ ಕಾರಣ, ಸರಿಯಾದ ದಿನಾಂಕವನ್ನು ನಮೂದಿಸಿ ಪರಿಷ್ಕರಿಸಿದ ಅಭಿಯೋಜನಾ ಮಂಜೂರಾತಿ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ: (4) ರ ಪತ್ರದಲಿ ಕೋರಲಾಗಿದ್ದು, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 017 ಕೆಇವಿ 09 ಬೆಂಗಳೂರು, ದಿನಾಂಕ : 16-12-2011.**

ಆರೋಪಿಯಾದ ಶ್ರೀ ಎ. ಮರೀಗೌಡ ಕೆಎಎಸ್ (ಕಿರಿಯ ಶ್ರೇಣಿ), ಹಿಂದಿನ ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ರಾಮನಗರ ಜಿಲ್ಲೆ ರಾಮನಗರ ಇವರನ್ನು ಹುದ್ದೆಯಿಂದ ತೆಗೆದು ಹಾಕುವ (ವಜಾ ಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಕರ್ನಾಟಕ ಸರ್ಕಾರವು ಶ್ರೀ ಎ. ಮರೀಗೌಡ ಕೆಎಎಸ್ (ಕಿರಿಯ ಶ್ರೇಣಿ), ಹಿಂದಿನ ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ರಾಮನಗರ ಜಿಲ್ಲೆ ರಾಮನಗರ ಇವರನ್ನು ಲಂಚ ನಿರೋಧ ಕಾಯ್ದೆ 1988 ರ ಕಲಂ 7 13(1)(d) ರ ಜೊತೆಯಲ್ಲಿ ಓದಲಾದ ಕಲಂ 13(2) ರ ಪ್ರಕಾರ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಈ ಮೂಲಕ ಮಂಜೂರಾತಿಯನ್ನು ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ, 1977 ರ ಪ್ರಕಾರ ಈ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿ ಅಡಿಯಲ್ಲಿ ದಿನಾಂಕ : 16-12-11 ರಂದು ಹೊರಡಿಸಿದೆ.

ದಿನಾಂಕ: 25-11-11 ರ ಆದೇಶ ಸಂಖ್ಯೆ: ಸಿಆಸುಇ 017 ಕೆಇವಿ 09 ಅನ್ನು ಹಿಂಪಡೆದಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಪಿ. ಮೋಹನ್ ರಾಜ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು)

ಪಿ.ಆರ್. 132

## ಕಾರ್ಮಿಕ ಸಚಿವಾಲಯ

**ವಿಷಯ :** ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ಹೊಸ ವೃತ್ತಿ ಘಟಕಗಳಾದ ಆಟೋಮೆಕಾನಿಕ್ ವೃತ್ತಿ ಘಟಕಗಳನ್ನು ಪ್ರಾರಂಭಿಸುವ ಕುರಿತು.

**ಓದಲಾಗಿದೆ:** ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಕೆ ಇವರ ಪತ್ರ ಸಂಖ್ಯೆ:ಉತನಿ/ತ/ಯೋ-2/ವಿವ 3/2011-12, ದಿನಾಂಕ: 9-5-2011.

**ಪ್ರಸ್ತಾವನೆ :**

ಮಾನ್ಯ ಮುಖ್ಯಮಂತ್ರಿಯವರು 2011-12ನೇ ಸಾಲಿನ ಆಯವ್ಯಯ ಭಾಷಣದಲ್ಲಿ "ಆಟೋಮೆಕಾನಿಕ್ ವೃತ್ತಿ ಘಟಕಗಳನ್ನು ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ಪ್ರಾಯೋಗಿಕ ಹಂತವಾಗಿ ಪರಿಚಯಿಸಲಾಗುವುದು" ಎಂದು ಹೇಳಿರುತ್ತಾರೆ. ಇದನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಮೇಲೆ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರದಲ್ಲಿ ಆಟೋಮೆಕಾನಿಕ್ ವೃತ್ತಿ ಘಟಕಗಳನ್ನು ಪ್ರಾಯೋಗಿಕ ಹಂತವಾಗಿ ರಾಜ್ಯ ವೃತ್ತಿ ಶಿಕ್ಷಣ ಪರಿಷತ್ತಿನಡಿಯಲ್ಲಿ, ಆಟೋಮೊಬೈಲ್ ವಿಷಯದ ಬಗ್ಗೆ ರಾಷ್ಟ್ರೀಯ ವೃತ್ತಿ ಶಿಕ್ಷಣ ಪರಿಷತ್ತು ನಡೆಸದೇ ಇರುವ ಕೆಳಕಂಡ ವೃತ್ತಿಗಳನ್ನು ಗುರುತಿಸಿ ಅವುಗಳನ್ನು ಕೆಳಕಂಡ ಸ್ಥಳಗಳಲ್ಲಿ ಪ್ರಾರಂಭಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

| ಕ್ರಮ ಸಂಖ್ಯೆ | ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ | ರಾಜ್ಯ ವೃತ್ತಿ ಶಿಕ್ಷಣ ಪರಿಷತ್ತಿನ ಕೋರ್ಸ್ ಹೆಸರು | ಕೋರ್ಸಿನ ಅವಧಿ | ವಿದ್ಯಾರ್ಥಿಗಳ ಸಂಖ್ಯೆ |
|---|---|---|---|---|
| 1 | ದಾವಣಗೆರೆ | Automobile Painter | 6 ತಿಂಗಳು | 84 |
| | | Motor Vehicle Service-General | 6 ತಿಂಗಳು | 84 |

| | | | | |
|---|---|---|---|---|
| 2 | ಪೀಣ್ಯ | Automobile Painter | 6 ತಿಂಗಳು | 84 |
| 3 | ಬಳ್ಳಾರಿ | Automobile Painter | 6 ತಿಂಗಳು | 84 |
| 4 | ಮಂಗಳೂರು | Auto Electrician & AC Mechanic | 1 ತಿಂಗಳು | 42 |
| 5 | ಕೆ.ಜಿ.ಎಫ್. | Auto Electrician & AC Mechanic | 1 ವರ್ಷ | 42 |
| 6 | ಮೈಸೂರು | Auto Electrician & AC Mechanic | 1 ವರ್ಷ | 84 |
| 7 | ಹೊಸೂರು ರಸ್ತೆ, ಬೆಂಗಳೂರು | Motor Vehicle Service-General | 6 ತಿಂಗಳು | 84 |
| | | | **Total** | **588** |

ಅಲ್ಲದೆ ಆಟೋ ಮೆಕಾನಿಕ್ ವೃತ್ತಿಗೆ ಸಂಬಂಧಿಸಿದಂತೆ ರಾಷ್ಟ್ರೀಯ ವೃತ್ತಿ ಶಿಕ್ಷಣ ಪರಿಷತ್ತು ನಡೆಸುವ ವೃತ್ತಿಗಳನ್ನು ಗುರುತಿಸಿ ಅವುಗಳನ್ನು ಕೆಳಕಂಡ ಸ್ಥಳಗಳಲ್ಲಿ ಪ್ರಾರಂಭಿಸಲು ಯೋಜಿಸಲಾಗಿದೆ ಎಂದು ತಿಳಿಸುತ್ತಾ, ವಿವರಗಳನ್ನು ಈ ಕೆಳಕಂಡಂತೆ ನೀಡಿರುವರು.

| ಕ್ರಮ ಸಂಖ್ಯೆ | ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ | ರಾಜ್ಯ ವೃತ್ತಿ ಶಿಕ್ಷಣ ಪರಿಷತ್ತಿನ ಕೋರ್ಸ ಹೆಸರು | ಕೋರ್ಸನ ಅವಧಿ | ವಿದ್ಯಾರ್ಥಿಗಳ ಸಂಖ್ಯೆ |
|---|---|---|---|---|
| 1 | ಗಂಗಾವತಿ | Motor Mechanic Vehicle | 2 ವರ್ಷ | 42 |
| 2 | ಭದ್ರಾವತಿ | Mechanical Auto Electrical & Electronics | 6 ತಿಂಗಳು | 84 |
| 3 | ಹುಬ್ಬಳ್ಳಿ | Mechanical Auto Electrical & Electronics | 6 ತಿಂಗಳು | 84 |
| 4 | ಹೊಸೂರು ರಸ್ತೆ, ಬೆಂಗಳೂರು | Mechanical Auto Electrical & Electronics | 1 ವರ್ಷ | 84 |
| 5 | ಬಿಜಾಪುರ | Mechanic repair & Maintenance of Light Vehciles | 1 ವರ್ಷ | 42 |
| | | | **Total** | **336** |

ಮುಂದುವರೆದು, ಸದರಿ ವೃತ್ತಿಗಳಿಗೆ ಸ್ಥಳೀಯವಾಗಿ ಹೆಚ್ಚಿನ ಬೇಡಿಕೆಯಿದ್ದು, ಅವುಗಳನ್ನು ಪ್ರಾರಂಭಿಸಲು ಅನುಮೋದನೆ ನೀಡಿದಲ್ಲಿ ಶಿಕ್ಷಣಾರ್ಥಿಗಳಿಗೆ ಹೆಚ್ಚಿನ ಉದ್ಯೋಗಾವಕಾಶ ದೊರೆಯಲು ಅನುಕೂಲವಾಗುತ್ತದೆ ಎಂದು, ಸದರಿ ಸಂಸ್ಥೆಗಳಲ್ಲಿ ಮೇಲ್ಕಂಡ ವೃತ್ತಿ ಘಟಕಗಳನ್ನು ಆರಂಭಿಸುವುದರಿಂದ ಒಟ್ಟು 924 ಹೆಚ್ಚುವರಿ ಅಭ್ಯರ್ಥಿಗಳಿಗೆ ತರಬೇತಿಯ ಅವಕಾಶವನ್ನು ಕಲ್ಪಿಸಿದಂತಾಗುತ್ತದೆ ಎಂದು, ಈ ಮೇಲ್ಕಂಡ ವೃತ್ತಿಗಳಲ್ಲಿ ತರಬೇತಿಯನ್ನು ಆರಂಭಿಸಲು ಅನಾವರ್ತಕ ವೆಚ್ಚ (ಯಂತ್ರೋಪಕರಣಗಳು) ಹಾಗೂ ಪೀಠೋಪಕರಣ ಖರೀದಿಗೆ) ರೂ.350.00 ಲಕ್ಷಗಳು ಹಾಗೂ ಅವರ್ತಕ ವೆಚ್ಚ (ಸಿಬ್ಬಂದಿ ವೇತನ ಮತ್ತು ಭತ್ಯೆ, ತರಬೇತಿ ವೆಚ್ಚ ಇತ್ಯಾದಿಗಳಿಗೆ) ವರ್ಷಕ್ಕೆ ರೂ.125.82 ಲಕ್ಷಗಳು ಬೇಕಾಗುತ್ತದೆ ಎಂದು ತಿಳಿಸಿರುವರು. ಸದರಿ ವೃತ್ತಿಯನ್ನು ಪ್ರಾರಂಭಿಸಲು ಗುರುತಿಸಿರುವ ಸ್ಥಳಗಳು ಆಟೋ ಮೆಕಾನಿಕ್ ವೃತ್ತಿಯನ್ನು ಪ್ರಾರಂಭಿಸಲು ಸೂಕ್ತ ಸ್ಥಳಾವಕಾಶ ಮತ್ತು ಅದಕ್ಕೆ ಬೇಕಾದ ಮೂಲಭೂತ ಸೌಕರ್ಯಗಳನ್ನು ಹೊಂದಿರುತ್ತವೆ ಎಂದು ತಿಳಿಸಿರುವರು.

ಮುಂದುವರೆದು, ಸದರಿ ಪ್ರಸ್ತಾವನೆಗೆ ತಗಲುವ ವೆಚ್ಚವನ್ನು ಇಲಾಖೆಯ ಲೆಕ್ಕ ಶೀರ್ಷಿಕೆ ಸಾಮಾನ್ಯ ವೆಚ್ಚಗಳು 2230–03–101–0–01–051 ಕೈಗಾರಿಕಾ ತರಬೇತಿ ಸಂಸ್ಥೆ (ಯೋಜನೆ) ಅಡಿಯಲ್ಲಿ ಭರಿಸಲು ಉದ್ದೇಶಿಸಲಾಗಿದೆ ಎಂದು, ಈ ಲೆಕ್ಕ ಶೀರ್ಷಿಕೆಯಲ್ಲಿ 2011–12ನೇ ಸಾಲಿಗೆ ಒದಗಿಸಿರುವ ಅನುದಾನವು ಪ್ರಸ್ತುತ ಅನುಷ್ಠಾನದಲ್ಲಿರುವ ಕಾರ್ಯಕ್ರಮಗಳಿಗೆ ಸಾಲದೇ ಬರುವುದರಿಂದ, ಸದರಿ ಪ್ರಸ್ತಾವನೆ ಕುರಿತಂತೆ ರೂ.475.82 ಲಕ್ಷಗಳ ಹೆಚ್ಚುವರಿ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುವರು.

ಸದರಿ ಸಂಸ್ಥೆಗಳಲ್ಲಿ 13 ಘಟಕಗಳ ಅನುಷ್ಠಾನಕ್ಕೆ 26 ಸಿಬ್ಬಂದಿಯವರ ಹುದ್ದೆಗಳನ್ನು ಸೃಜಿಸಲು ಕೋರಿರುವರು, ಅಲ್ಲದೇ ಈ 26 ಸಿಬ್ಬಂದಿಗಳ ಹುದ್ದೆಗಳನ್ನು ಸೃಜಿಸಿ ಮಂಜೂರಾತಿ ನೀಡುವುದಲ್ಲದೇ ಹಾಲಿ ಇರುವ ನಿರ್ಬಂಧವನ್ನು ಸಡಿಲಿಸಿ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಅನುಮತಿ ಕೋರುತ್ತಾ, ರೂ.475.82 ಲಕ್ಷಗಳ ಹೆಚ್ಚುವರಿ ಅನುದಾನವನ್ನು ಒದಗಿಸಿ ಆದೇಶ ಹೊರಡಿಸುವಂತೆ ಕೋರಿರುವರು.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಾಇ 98 ಇಟಿಐ 2011, ಬೆಂಗಳೂರು, ದಿನಾಂಕ: 16 ನೇ ಡಿಸೆಂಬರ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ರಾಷ್ಟ್ರೀಯ ವೃತ್ತಿ ಶಿಕ್ಷಣ ಪರಿಷತ್ತ್‌ನ ನಮೂನೆಯನ್ವಯ 5 ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ಆಟೋ ಮೆಕಾನಿಕ್ ವೃತ್ತಿಯನ್ನು ಪ್ರಾರಂಭಿಸಲು ಮತ್ತು ಅದಕ್ಕೆ ಅಗತ್ಯವಿರುವ 5 ಬೋಧಕ ಹುದ್ದೆಗಳನ್ನು ಸೃಜಿಸುವುದಕ್ಕೆ ಹಾಗೂ ರೂ.1.50 ಕೋಟಿ (ಒಂದು ಕೋಟಿ ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಅನಾವರ್ತಕ ವೆಚ್ಚಕ್ಕೆ ಮತ್ತು ಅಗತ್ಯವಿರುವ ಆವರ್ತಕ ವೆಚ್ಚವನ್ನು ಉದ್ಯೋಗ ಮತ್ತು ತರಬೇತಿ ಇಲಾಖೆಯ ಆಯವ್ಯಯ ಉಳಿತಾಯದಿಂದ ಭರಿಸುವುದಕ್ಕೆ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 579 ವೆಚ್ಚ–9/11 ದಿನಾಂಕ:17–11–2011ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ.ಎಸ್. ವಿಶ್ವನಾಥಪ್ಪ**

ಪೀಠಾಧಿಕಾರಿ

ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

ಪಿ.ಆರ್.133

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್‌ನ ಕಾರ್ಯಕಾರಿ ನಿರ್ದೇಶಕರ ಹುದ್ದೆಯನ್ನು ಗುತ್ತಿಗೆ ಆಧಾರದ ಮೇಲೆ ನೇಮಿಸಿ ಭರ್ತಿ ಮಾಡುವ ಬಗ್ಗೆ.

**ಓದಲಾಗಿದೆ:** ಆರ್ಥಿಕ ಇಲಾಖೆಯ ಅಧಿಸೂಚನೆ ಸಂಖ್ಯೆ:ಆಇ1051 ವೆಚ್ಚ–12/11, ದಿನಾಂಕ:08–12–2011

**ಪ್ರಸ್ತಾವನೆ :**

ರಾಜ್ಯದ ಬಡತನ ರೇಖೆಗಿಂತ ಕೆಳಗಿರುವವರಿಗೆ ಒಮ್ಮೆಲೆ ದುರಂತ ಉಂಟು ಮಾಡುವ ರೋಗಗಳಿಗೆ ಉಚಿತ ಆರೋಗ್ಯ ಚಿಕಿತ್ಸೆಯನ್ನು ನೀಡುವ ಸಲುವಾಗಿ ಗುಲ್ಬರ್ಗ ಮತ್ತು ಬೆಳಗಾಂ ವಿಭಾಗಗಳಲ್ಲಿನ ಜಿಲ್ಲೆಗಳಲ್ಲಿ ಆರೋಗ್ಯಶ್ರೀ ಎಂಬ ಯೋಜನೆಯನ್ನು ಜಾರಿಗೊಳಿಸಲಾಗುತ್ತಿದೆ. ಈ

ಯೋಜನೆಯನ್ನು ಜಾರಿಗೊಳಿಸಲು ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್‌ನ್ನು ಸ್ಥಾಪಿಸಲಾಗಿದೆ. ಈ ಟ್ರಸ್ಟ್‌ನಲ್ಲಿ ಮುಖ್ಯಮಂತ್ರಿಯವರು ಮುಖ್ಯ ಪೋಷಕರಾಗಿರುತ್ತಾರೆ. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ಮತ್ತು ವೈದ್ಯಕೀಯ ಶಿಕ್ಷಣ ಸಚಿವರು ಪೋಷಕರಾಗಿರುತ್ತಾರೆ. ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರು ಸದರಿ ಟ್ರಸ್ಟ್‌ನ ಅಧ್ಯಕ್ಷರಾಗಿದ್ದಾರೆ. ಈ ಟ್ರಸ್ಟ್‌ನ ಕಾರ್ಯಕಾರಿ ನಿರ್ದೇಶಕರು ಸದರಿ ಟ್ರಸ್ಟ್‌ನ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುವರು.

ಸರ್ಕಾರವು ಮೇಲ್ಕಂಡ ಟ್ರಸ್ಟ್‌ನ ಕಾರ್ಯಕಾರಿ ನಿರ್ದೇಶಕರನ್ನು ನೇಮಿಸುತ್ತದೆ. ಅದರನ್ವಯ ಟ್ರಸ್ಟ್‌ನ ಕಾರ್ಯಕಾರಿ ನಿರ್ದೇಶಕರ ಹುದ್ದೆಗೆ ಶ್ರೀ ಜಿ.ಕುಮಾರ ನಾಯಕ್, ಭಾರತೀಯ ಆಡಳಿತ ಸೇವೆ ಅಧಿಕಾರಿ ಇವರನ್ನು ನೇಮಿಸಲಾಗಿತ್ತು. ಶ್ರೀ ಜಿ. ಕುಮಾರ ನಾಯಕ್ ಇವರ ವರ್ಗಾವಣೆಯ ನಂತರ ಸದರಿ ಹುದ್ದೆಯು ದಿನಾಂಕ 30-12-2010 ರಿಂದ ಖಾಲಿಯಿರುತ್ತದೆ. ಈ ಹುದ್ದೆಯಲ್ಲಿ ಶ್ರೀ ಜಿ. ಕುಮಾರ ನಾಯಕ್, ಭಾ.ಆ.ಸೇ., ಸರ್ಕಾರದ ಕಾರ್ಯದರ್ಶಿ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ ಇವರನ್ನು ಅಧಿಕ ಪ್ರಭಾರದಲ್ಲಿರಿಸಿ ನೇಮಿಸಲಾಗಿತ್ತು. ದೀರ್ಘಕಾಲದಿಂದ ಖಾಲಿಯಿರುವ ಈ ಹುದ್ದೆಯನ್ನು ಪೂರ್ಣ ಕಾಲಿಕ ಅಧಿಕಾರಿಯಿಂದ ತುಂಬುವುದು ಅತ್ಯಂತ ಅವಶ್ಯವಿದೆ.

ದಿನಾಂಕ 29-05-2009ರಂದು ನಡೆದ ಸದರಿ ಟ್ರಸ್ಟ್‌ನ ಆಡಳಿತ ಮಂಡಳಿ ಸಭೆಯಲ್ಲಿ, ಈ ಟ್ರಸ್ಟ್‌ನ ಕಾರ್ಯಕಾರಿ ನಿರ್ದೇಶಕರಾಗಿ ಕಾರ್ಯ ನಿರ್ವಹಿಸುವ ಅಧಿಕಾರಿ ಐ.ಎ.ಎಸ್. ಅಧಿಕಾರಿಯಾಗಬೇಕಿದ್ದು, ಅವರು 5 ವರ್ಷಗಳ ಅನುಭವವುಳ್ಳವರಾಗಿರಬೇಕೆಂದು ಠರಾವು ಹೊರಡಿಸಿದೆ. ಶ್ರೀ ಡಿ.ಎನ್. ನಾಯಕ್, ನಿವೃತ್ತ ಭಾರತೀಯ ಆಡಳಿತ ಸೇವೆ ಅಧಿಕಾರಿ ಇವರು ಐ.ಎ.ಎಸ್. ವೃಂದದಲ್ಲಿ 21 ವರ್ಷಗಳ ಸುಧೀರ್ಘ ಸೇವೆಯನ್ನು ಸಲ್ಲಿಸಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಆಯುಕ್ತರಾಗಿ ಸೂಪರ್ ಟೈಮ್ ಸ್ಕೇಲ್ ವೃಂದದಲ್ಲಿ ದಿನಾಂಕ 31-5-2011ರಂದು ವಯೋನಿವೃತ್ತಿ ಹೊಂದಿರುತ್ತಾರೆ. ಇವರ ಭಾರತೀಯ ಆಡಳಿತ ಸೇವೆಯ ಅನುಭವ ಮತ್ತು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಆಯುಕ್ತರಾಗಿ ಸೇವೆ ಸಲ್ಲಿಸಿರುವ ಅನುಭವವನ್ನು ಗಮನದಲ್ಲಿರಿಸಿ ಶ್ರೀ ಡಿ.ಎನ್.ನಾಯಕ್ ಇವರನ್ನು ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್‌ನ ಕಾರ್ಯಕಾರಿ ನಿರ್ದೇಶಕರಾಗಿ ಗುತ್ತಿಗೆ ಆಧಾರದ ಮೇಲೆ ನೇಮಿಸುವುದನ್ನು ಪರಿಗಣಿಸಲಾಗಿದೆ.

ಮುಂದುವರೆದು ಮೇಲೆ ಓದಲಾದ ದಿನಾಂಕ 8-12-2011ರ ಅಧಿಸೂಚನೆ ಅನ್ವಯ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ)ರಡಿ, ಶ್ರೀ ಡಿ.ಎನ್. ನಾಯಕ್ ಇವರನ್ನು ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್‌ನ ಕಾರ್ಯಕಾರಿ ನಿರ್ದೇಶಕರ ಹುದ್ದೆಗೆ ಗುತ್ತಿಗೆ ಆಧಾರದ ಮೇಲೆ ನೇಮಿಸಲು ವಿನಾಯಿತಿ ನೀಡಲಾಗಿದೆ.

ಆದುದರಿಂದ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ : ಆಕುಕ 271 ಸಿಜಿಇ 2011, ಬೆಂಗಳೂರು, ದಿನಾಂಕ: 09 ನೇ ಡಿಸೆಂಬರ್ 2011.**

ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್‌ನ ಕಾರ್ಯಕಾರಿ ನಿರ್ದೇಶಕರ ಹುದ್ದೆಗೆ ಶ್ರೀ ಡಿ.ಎನ್. ನಾಯಕ್, ಭಾ.ಆ.ಸೇ.(ನಿವೃತ್ತ) ಇವರನ್ನು, ಅವರು ಪ್ರಭಾರ ವಹಿಸಿಕೊಂಡ ದಿನದಿಂದ ಜಾರಿಗೆ ಬರುವಂತೆ ಎರಡು ವರ್ಷಗಳ ಅವಧಿಗೆ, ಮಾಸಿಕ ರೂ.80,000/- ಸಂಚಿತ ವೇತನದಲ್ಲಿ ಗುತ್ತಿಗೆ ಆಧಾರದ ಮೇಲೆ ನೇಮಿಸಲಾಗಿದೆ. ಇವರ ಗುತ್ತಿಗೆ ನೇಮಕಾತಿಗೆ ಸಂಬಂಧಿಸಿದಂತೆ ಈ ಕೆಳಗಿನ ಷರತ್ತುಗಳನ್ನು ನಿಗದಿಪಡಿಸಲಾಗಿದೆ.

1. ಶ್ರೀ ಡಿ.ಎನ್.ನಾಯಕ್ ಇವರ ಮಾಸಿಕ ಸಂಚಿತ ವೇತನ ರೂ.80,000/- ಇರುತ್ತದೆ.
2. ಇದಲ್ಲದೆ, ಸರ್ಕಾರದ ಕಾರ್ಯದರ್ಶಿಗಳಿಗೆ ಇರುವಂತೆ ವಾಹನ ಸೌಕರ್ಯ, ಗೃಹ ದೂರವಾಣಿ, ಮೊಬೈಲ್ ವೆಚ್ಚ ಹಾಗೂ ವೃತ್ತ ಪತ್ರಿಕೆ ವೆಚ್ಚಗಳನ್ನು ಸಹ ಪಡೆಯಲು ಅರ್ಹರಿರುತ್ತಾರೆ.
3. ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್‌ನ ಕೆಲಸಕ್ಕಾಗಿ ಹೊರ ಜಿಲ್ಲೆಗಳಿಗೆ ಅಥವಾ ರಾಜ್ಯದ ಹೊರಗೆ ಪ್ರವಾಸ ಕೈಗೊಂಡಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ನೀಡಲ್ಪಡುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆ ಹಾಗೂ ಇನ್ನಿತರೆ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅನಧಿಕೃತ ಟಿಪ್ಪಣಿ ಸಂಖ್ಯೆ:ಪ್ರಕಾ/9972/ಡಿಪಿ, ದಿನಾಂಕ 1-12-2011ರಲ್ಲಿ ನೀಡಿದ ಮಾಹಿತಿಯನ್ವಯ ಹೊರಡಿಸಲಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.134

**ಪಿ.ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಹನುಮಂತಪ್ಪ, ನಿವೃತ್ತ ಮುಖ್ಯ ಇಂಜಿನಿಯರ್, ಹಾಗೂ ಶ್ರೀ ಸಿ. ವಿಶ್ವನಾಥ್, ನಿವೃತ್ತ ಕಾರ್ಯಪಾಲಕ ಇಂಜಿನಿಯರ್, ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯ ಅಂತಿಮ ಆದೇಶ ಕುರಿತು.

**ಓದಲಾಗಿದೆ:**

1. ಸರ್ಕಾರಿ ಆದೇಶ ಕ್ರಮಾಂಕ:ಸಿಆಸುಇ 54 ಎಸ್‌ಇಎನ್ 99, ದಿನಾಂಕ:20-10-2003
2. ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ:14277/2002, ದಿನಾಂಕ:24-03-2011ರಂದು ನೀಡಿರುವ ಆದೇಶ.
3. ಕರ್ನಾಟಕ ಲೋಕಾಯುಕ್ತವನ್ನು ಉದ್ದೇಶಿಸಿ ಬರೆದಿರುವ ಸರ್ಕಾರದ ಪತ್ರ ಸಂಖ್ಯೆ: ಸಿಆಸುಇ 104 ಎಸ್‌ಇಎನ್ 2003, ದಿನಾಂಕ:17-08-2011.
4. ಅಪರ ನಿಬಂಧಕರು (ವಿಚಾರಣೆಗಳು-3), ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ:ಲೋಕೆ/ಎಆರ್‌ಇ-3 ಇಎನ್‌ಕ್ಯೂ-50/2003, ದಿನಾಂಕ:30-08-2011.

**ಪ್ರಸ್ತಾವನೆ :**

ತುಂಗ ಮೇಲ್ದಂಡೆ ಯೋಜನೆ ವೃತ್ತ, ಶಿವಮೊಗ್ಗ ಇಲ್ಲಿ ಅಧೀಕ್ಷಕ ಇಂಜಿನಿಯರ್ ಆಗಿ ಹಾಗೂ ತುಂಗ ಮೇಲ್ದಂಡೆ ಯೋಜನಾ ವಿಭಾಗ, ರಾಣೆಬೆನ್ನೂರು ಇಲ್ಲಿ ಕಾರ್ಯಪಾಲಕ ಇಂಜಿನಿಯರ್ ಆಗಿ, ಕಾರ್ಯನಿರ್ವಹಿಸುತ್ತಿದ್ದಾಗ ಸಾಕಷ್ಟು ಹಣಕಾಸು ಲಭ್ಯವಿದ್ದರೂ ಸಹ ಪ್ರಗತಿಯನ್ನು

ಸಾಧಿಸಲು ವಿಫಲವಾದ ಮತ್ತು ರಾಣೆಬೆನ್ನೂರು ವಿಭಾಗದಲ್ಲಿ ಹಣಕಾಸು ಅವ್ಯವಹಾರಗಳನ್ನು ತಡೆಯಲು ವಿಫಲರಾಗಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿದ ಆರೋಪಕ್ಕಾಗಿ ಶ್ರೀ ಹನುಮಂತಪ್ಪ, ನಿವೃತ್ತ ಮುಖ್ಯ ಇಂಜಿನಿಯರ್, ಹಾಗೂ ಶ್ರೀ ಸಿ. ವಿಶ್ವನಾಥ್, ನಿವೃತ್ತಿ ಕಾರ್ಯಪಾಲಕ ಇಂಜಿನಿಯರ್, ಅವರುಗಳ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ 20–10–2003ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಅಪರ ನಿಬಂಧಕರು, ವಿಚಾರಣೆಗಳು–3, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಸದರಿ ವಿಚಾರಣೆ ಆದೇಶದ ವಿರುದ್ಧ ಶ್ರೀ ಸಿ. ವಿಶ್ವನಾಥ್, ನಿವೃತ್ತ ಕಾರ್ಯಪಾಲಕ ಇಂಜಿನಿಯರ್, ಇವರು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ: 14277/2002ರನ್ನು ದಾಖಲಿಸಿದ್ದರು. ಮೇಲೆ ಓದಲಾದ (2)ರ ದಿನಾಂಕ:24–03–2011ರಂದು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಈ ಕೆಳಕಂಡಂತೆ ಆದೇಶಿಸಿದೆ.

“The application is allowed;

The order bearing No.Si.Aa.Su.E 54 SEN 99, date:02-01-2002 issued by the 1st respondent and orders dated 09-10-2002 and 28-10-2002 issued by the 3rd respondent (vide Annexure-A1, A4 & A5) are hereby quashed”

ಮೇಲ್ಕಂಡ ಆದೇಶ ಕುರಿತಂತೆ ಮೇಲ್ಮನವಿಯನ್ನು ಸಲ್ಲಿಸುವ ಕುರಿತು ಮೇಲೆ ಓದಲಾದ (3) ದಿನಾಂಕ 17–08–2011 ರಲ್ಲಿ ಅಪರ ನಿಬಂಧಕರು (ವಿಚಾರಣೆಗಳು–3), ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಅಭಿಪ್ರಾಯವನ್ನು ಕೋರಲಾಗಿತ್ತು. ಮೇಲೆ ಓದಲಾದ (4)ರ ದಿನಾಂಕ 30–08–2011ರಂದು ಈ ಪ್ರಕರಣವು ಮೇಲ್ಮನವಿಯನ್ನು ಸಲ್ಲಿಸಲು ಉಚಿತವಲ್ಲವೆಂದು ಅಪರ ನಿಬಂಧಕರು (ವಿಚಾರಣೆಗಳು–3), ಕರ್ನಾಟಕ ಲೋಕಾಯುಕ್ತ ಇವರು ಅಭಿಪ್ರಾಯವನ್ನು ನಿಡಿದ್ದಾರೆ. ಅದೇ ಪ್ರಕಾರ ಚೇರ್‌ಮನ್ ಲೀಗಲ್ ಸೆಲ್ ಕರ್ನಾಟಕ ಲೋಕಾಯುಕ್ತ, ಇವರೂ ಸಹ ಮೇಲ್ಮನವಿ ಸಲ್ಲಿಸಲು ಉಚಿತವಲ್ಲವೆಂದು ಅಭಿಪ್ರಾಯ ನೀಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶದಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 104 ಎಸ್‌ಇಎನ್ 2003, ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2011.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಹನುಮಂತಪ್ಪ, ನಿವೃತ್ತ ಮುಖ್ಯ ಇಂಜಿನಿಯರ್ ಹಾಗೂ ಶ್ರೀ ಸಿ. ವಿಶ್ವನಾಥ್, ನಿವೃತ್ತ ಕಾರ್ಯಪಾಲಕ ಇಂಜಿನಿಯರ್, ಇವರಿಬ್ಬರನ್ನು ಈ ಪ್ರಕರಣದಲ್ಲಿ ಅವರ ವಿರುದ್ಧ ಮಾಡಲಾದ ಆರೋಪಗಳಿಂದ ದೋಷ ಮುಕ್ತರನ್ನಾಗಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್.ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್.135 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವೆಗಳು–3)

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ವಿಜಾಪುರ ಜಿಲ್ಲೆ ಸಿಂದಗಿ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಯೋಇ 309 ಪಿಟಿಪಿ 94, ದಿನಾಂಕ:07–08–1995

**2.** ಉನ್ನತ ಶಿಕ್ಷಣ, ಯೋಜನೆ ಹಾಗೂ ಸಾಂಖ್ಯಿಕ ಸಚಿವರ ಆಪ್ತ ಕಾರ್ಯದರ್ಶಿ ಇವರ ಪತ್ರ ಸಂ:ಉಶಿಯೋಸಾ:ಅಕ:921/2011, ದಿನಾಂಕ:13–10–2011

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ 07–08–1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ / ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮಾನ್ಯ ಯೋಜನಾ ಸಚಿವರ ಶಿಫಾರಸ್ಸು ಮೇರೆಗೆ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವಂತೆ ವಿಜಾಪುರ ಜಿಲ್ಲೆಯ ಸಿಂದಗಿ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಯೋಇ 108 ಯೋವಿವಿ 2011, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2011.**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈ ಕೆಳಕಂಡ ಆರು ಜನರನ್ನು ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

**ವಿಜಾಪುರ ಜಿಲ್ಲೆ**

| ಕ್ರ.ಸಂ. | ಹೆಸರು | ವರ್ಗ |
|---|---|---|
| 1. | ಶ್ರೀ ಕಲ್ಲಣ್ಣ ಈರಣ್ಣ ದೇಸಾಯಿ, ಸಾ:ಹಂದಿಗನೂರು, ಸಿಂದಗಿ ತಾಲ್ಲೂಕು | ಸಾಮಾನ್ಯ |
| 2. | ಶ್ರೀ ಬಸವರಾಜ ಶಿವರಾಯ ತಾವರಗೇರಿ ಸಾ:ಕಡಣಿ, ಸಿಂದಗಿ ತಾಲ್ಲೂಕು | ಸಾಮಾನ್ಯ |

| | | |
|---|---|---|
| 3 | ಶ್ರೀ ಚಂದ್ರಕಾಂತ ಶರಣಪ್ಪ ಸಗರ, ಸಾ:ಬಮ್ಮನ ಹಳ್ಳಿ, ಸಿಂದಗಿ ತಾಲ್ಲೂಕು | 2-ಎ (ಹಿಂದುಳಿದ ವರ್ಗ-ಅ) |
| 4 | ಶ್ರೀ ಅರ್ಜುನ ಕಲ್ಲಪ್ಪ ಮುಜುವಾರ, ಸಾ:ಯಂಕಂಚಿ, ಸಿಂದಗಿ ತಾಲ್ಲೂಕು | 2-ಎ (ಹಿಂದುಳಿದ ವರ್ಗ-ಅ) |
| 5 | ಶ್ರೀ ಅಂಬಣ್ಣ ಶಿವಪ್ಪ, ಹೊಸಮನಿ, ಸಾ:ಚಿಕ್ಕಸಿಂದಗಿ, ಸಿಂದಗಿ ತಾಲ್ಲೂಕು | ಎಸ್.ಸಿ. |
| 6. | ಯಮುನಾಬಾಯಿ, ಮಲ್ಲಕಾರ್ಜುನ ಬಂಕಲಗಿ, ಸಾ:ಮಡ್ನಳ್ಳಿ ಸಿಂದಗಿ ತಾಲ್ಲೂಕು | ಮಹಿಳೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ-1 & 2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

ಪಿ.ಆರ್.136

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಬಿ. ವಿ. ವಸಂತಕುಮಾರ್, ಉಪ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ಹಿಂದಿನ ಸೇವೆಯನ್ನು ಪಿಂಚಣಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವ ಬಗ್ಗೆ.-

**ಓದಲಾಗಿದೆ :** ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ಪತ್ರ ಸಂಖ್ಯೆ ಸಿಎಸ್ಎ 444 ಎಸ್‌ಪಿಎಫ್ 2011/27-07-2011.

**ಪ್ರಸ್ತಾವನೆ :**

ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಶ್ರೀ ಬಿ. ವಿ. ವಸಂತಕುಮಾರ್, ಉಪ ನಿಯಂತ್ರಕರು ಇವರು ಕರ್ನಾಟಕ ಲೋಕಸೇವಾ ಆಯೋಗದಿಂದ ಗ್ರೂಪ್ 'ಎ' ಪತ್ರಾಂಕಿತ ಅಧಿಕಾರಿಯಾಗಿ ಆಯ್ಕೆಗೊಂಡು ರಾಜ್ಯ ಲೆಕ್ಕಪತ್ರ ಇಲಾಖೆಯಲ್ಲಿ ಸಹಾಯಕ ನಿಯಂತ್ರಕರಾಗಿ ದಿನಾಂಕ 08-05-2006 ರಂದು ಕರ್ತವ್ಯಕ್ಕೆ ಹಾಜರಾಗಿದ್ದು, ರಾಜ್ಯ ಲೆಕ್ಕಪತ್ರ ಇಲಾಖೆಗೆ ಸೇವೆಗೆ ಸೇರುವ ಮುನ್ನ ದಿನಾಂಕ 04-05-1999 ರಿಂದ 06-05-2006 (07-05-2006 ಭಾನುವಾರ)ರವರೆಗೆ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಪ್ರೌಢ ಶಾಲಾ ಮುಖ್ಯ ಶಿಕ್ಷಕರಾಗಿ ಸೇವೆ ಸಲ್ಲಿಸಿದ್ದು, ಸದರಿ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 224(ಬಿ)ರನ್ವಯ ಪಿಂಚಣಿ ಸೌಲಭ್ಯಗಳಿಗಾಗಿ ಅರ್ಹತಾದಾಯಕ ಸೇವೆ ಎಂದು ಪರಿಗಣಿಸುವ ಪ್ರಸ್ತಾವನೆ ಸಲ್ಲಿಸಿದ್ದಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 250 ರಾಲೆಪ 2011, ಬೆಂಗಳೂರು, ದಿನಾಂಕ : 07-12-2011.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಬಿ. ವಿ. ವಸಂತಕುಮಾರ್, ಉಪ ನಿಯಂತ್ರಕರು, ಇವರು ರಾಜ್ಯ ಲೆಕ್ಕಪತ್ರ ಇಲಾಖೆಗೆ ಸೇರುವ ಮುನ್ನ ದಿನಾಂಕ 04-05-1999 ರಿಂದ 06-05-2006 ರವರೆಗೆ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಪೌಢಶಾಲಾ ಮುಖ್ಯ ಶಿಕ್ಷಕರಾಗಿ ಸಲ್ಲಿಸಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 224(ಬಿ)ರನ್ವಯ ಪಿಂಚಣಿ ಸೌಲಭ್ಯಗಳಿಗೆ ಮಾತ್ರ ಅರ್ಹತಾದಾಯಕ ಸೇವೆ ಎಂದು ಪರಿಗಣಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

ಪಿ.ಆರ್. 137

## ಆರ್ಥಿಕ ಸಚಿವಾಲಯ

**ವಿಷಯ :** ರಾಜ್ಯ ಸರ್ಕಾರದ ಆಸ್ತಿ-ಋಣ ನಿರ್ವಹಿಸಲು ಖಜಾನೆ-II ಯೋಜನೆಯಡಿ ಸಮಾಲೋಚಕರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಪತ್ರ ಸಂ. ಆಇ 5 ಎಸ್‌ಒಎಫ್‌ಸಿ 2011, ದಿನಾಂಕ 03-11-2011

**2.** ಅಧಿಸೂಚನೆ ಸಂಖ್ಯೆ: ಆಇ 908 ವೆಚ್ಚ-12/2011, ದಿನಾಂಕ 19-10-2011

**3.** ಸಮಾಲೋಚಕರ ಪತ್ರ ಸಂ.ಎಫ್‌ಡಿ/ಎಎಲ್ಎಂ/ಎಸ್‌ಆರ್/2011-12, ದಿನಾಂಕ 16-11-2011

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಪತ್ರದಲ್ಲಿ ರಾಜ್ಯ ಸರ್ಕಾರದ ಆಸ್ತಿ-ಋಣ ನಿರ್ವಹಣೆಗಾಗಿ ಡಾಟಾಬೇಸ್ ಸಿದ್ಧಪಡಿಸುವ ಮತ್ತು ಆರ್ಥಿಕ ಲೆಕ್ಕಗಳಲ್ಲಿ ಬಾಕಿ ಮೊತ್ತಗಳೆಂದು ತೋರಿಸಲಾದ ಅಂಕಿ-ಅಂಶಗಳ ಹೊಂದಾಣಿಕೆ ಕಾರ್ಯದಲ್ಲಿ ಸರ್ಕಾರಕ್ಕೆ ನೆರವಾಗಲು ಕೆಳಕಂಡ ಸಮಾಲೋಚಕರುಗಳ ಸೇವೆಯನ್ನು ಆರು ತಿಂಗಳ ಅವಧಿಗೆ ಪಡೆದುಕೊಳ್ಳಲು ನಿರ್ಧರಿಸಲಾಗಿದೆ. ಅಲ್ಲದೆ, ಪ್ರತಿ ತಿಂಗಳು ಮಾಸಿಕ ವರದಿ ಸಲ್ಲಿಸಿದ ನಂತರ ಈ ಸಮಾಲೋಚಕರಿಗೆ ಮಾಸಿಕ ತಲಾ ರೂ. 25,000/- ಶುಲ್ಕ ಪಾವತಿಸಲು ತಿಳಿಸಲಾಗಿದೆ. ಮುಂದುವರೆದು ಈ ಕಾರ್ಯ ಕೈಗೊಳ್ಳಲು ಪಿಂಚಣಿ, ಸಣ್ಣ ಉಳಿತಾಯ, ಆಸ್ತಿ-ಋಣ ನಿರ್ವಹಣೆ ಇಲಾಖೆಯ ನಿರ್ದೇಶಕರು ಸಮಾಲೋಚಕರುಗಳಿಗೆ ಎಲ್ಲಾ ಆಡಳಿತಾತ್ಮಕ ನೆರವು ನೀಡಲು ಸಹ ತಿಳಿಸಲಾಗಿದೆ.

| ಕ್ರ.ಸಂ. | ಹೆಸರು |
|---|---|
| 1 | ಶ್ರೀ ಟಿ. ಎನ್. ನಾಗರಾಜನ್, ನಿವೃತ್ತ ಹಿರಿಯ ಲೆಕ್ಕಾಧಿಕಾರಿ, ಮಹಾಲೇಖಪಾಲರ ಕಛೇರಿ |
| 2 | ಶ್ರೀ ಸಿ. ಎಂ. ರಘೋತ್ತಮ, ನಿವೃತ್ತ ಹಿರಿಯ ಲೆಕ್ಕಾಧಿಕಾರಿ, ಮಹಾಲೇಖಪಾಲರ ಕಛೇರಿ |

| | |
|---|---|
| 3 | ಶ್ರೀ ಕೆ. ವಾದಿರಾಜ್, ನಿವೃತ್ತ ಹಿರಿಯ ಲೆಕ್ಕಾಧಿಕಾರಿ, ಮಹಾಲೇಖಪಾಲರ ಕಛೇರಿ |
| 4 | ಶ್ರೀ ಎಸ್. ಎಲ್. ಬಾಲಸುಬ್ರಮಣ್ಯಂ, IA & AS – ಹಿರಿಯ ಲೆಕ್ಕಾಧಿಕಾರಿ, ಮಹಾಲೇಖಪಾಲರ ಕಛೇರಿ |
| 5 | ಶ್ರೀ ಕೆ. ವಿ. ವೆಂಕಟೇಶ್, ನಿವೃತ್ತ ಜಿಲ್ಲಾ ಖಜಾನಾಧಿಕಾರಿ |

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಸಮಾಲೋಚಕರುಗಳ ಸೇವೆಯನ್ನು ನೇರವಾಗಿ ಪಡೆದುಕೊಳ್ಳಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ರಿಂದ ವಿನಾಯಿತಿಯನ್ನು ಪಡೆಯಲಾಗಿದೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಪತ್ರದಲ್ಲಿ ಸಮಾಲೋಚಕರು ಅಕ್ಟೋಬರ್ 2011ರ ಮಾಸಿಕ ವರದಿಯನ್ನು ಕಳುಹಿಸಿ ಶ್ರೀ ಟಿ. ಎನ್. ನಾಗರಾಜನ್, ಶ್ರೀ ಸಿ. ಎಂ. ರಘೋತ್ತಮ, ಶ್ರೀ ಕೆ. ವಾದಿರಾಜ್ ಮತ್ತು ಶ್ರೀ ಕೆ. ವಿ. ವೆಂಕಟೇಶ್ ರವರುಗಳಿಗೆ ಸಮಾಲೋಚನಾ ಶುಲ್ಕವನ್ನು ಪಾವತಿಸುವಂತೆ ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 27307 ಮುಂಗಡ 2011, ಬೆಂಗಳೂರು, ದಿನಾಂಕ 13–12–2011.**

ರಾಜ್ಯ ಸರ್ಕಾರದ ಆಸ್ತಿ–ಋಣ ನಿರ್ವಹಣೆಗಾಗಿ ಖಜಾನೆ–II ಯೋಜನೆಯಡಿ ಡಾಟಾಬೇಸ್ ಸಿದ್ಧಪಡಿಸುವ ಮತ್ತು ಆರ್ಥಿಕ ಲೆಕ್ಕಗಳಲ್ಲಿ ಬಾಕಿ ಮೊತ್ತಗಳೆಂದು ತೋರಿಸಲಾದ ಅಂಕಿ–ಅಂಶಗಳ ಹೊಂದಾಣಿಕೆ ಕಾರ್ಯದಲ್ಲಿ ಸರ್ಕಾರಕ್ಕೆ ನೆರವಾಗಲು ಆರು ತಿಂಗಳ ಅವಧಿಗೆ ಸಮಾಲೋಚಕರಾಗಿ ಕಾರ್ಯ ನಿರ್ವಹಿಸುತ್ತಿರುವ ಕೆಳಕಂಡವರಿಗೆ ಪ್ರತಿ ತಿಂಗಳು ಮಾಸಿಕ ವರದಿ ಸಲ್ಲಿಸಿದ ನಂತರ ಮಾಸಿಕ ತಲಾ ರೂ. 25,000/– (ರೂಪಾಯಿ ಇಪ್ಪತ್ತೈದು ಸಾವಿರ ಮಾತ್ರ) ಶುಲ್ಕ ಪಾವತಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ. | ಹೆಸರು |
|---|---|
| 1 | ಶ್ರೀ ಟಿ. ಎನ್. ನಾಗರಾಜನ್, ನಿವೃತ್ತ ಹಿರಿಯ ಲೆಕ್ಕಾಧಿಕಾರಿ, ಮಹಾಲೇಖಪಾಲರ ಕಛೇರಿ |
| 2 | ಶ್ರೀ ಸಿ. ಎಂ. ರಘೋತ್ತಮ, ನಿವೃತ್ತ ಹಿರಿಯ ಲೆಕ್ಕಾಧಿಕಾರಿ, ಮಹಾಲೇಖಪಾಲರ ಕಛೇರಿ |
| 3 | ಶ್ರೀ ಕೆ. ವಾದಿರಾಜ್, ನಿವೃತ್ತ ಹಿರಿಯ ಲೆಕ್ಕಾಧಿಕಾರಿ, ಮಹಾಲೇಖಪಾಲರ ಕಛೇರಿ |
| 4 | ಶ್ರೀ ಕೆ. ವಿ. ವೆಂಕಟೇಶ್, ನಿವೃತ್ತ ಜಿಲ್ಲಾ ಖಜಾನಾಧಿಕಾರಿ |

ಈ ಸಂಬಂಧ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ '2054–00–095–0–01–125 (ಆಧುನೀಕರಣ)' ಅಡಿಯಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 138 ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು)

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಬೆಂಗಳೂರು ನಗರದಲ್ಲಿ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರವನ್ನು [ಡಿ.ಡಿ.ಆರ್.ಸಿ.] ಪ್ರಾರಂಭಿಸುವ ಬಗ್ಗೆ.–

**ಓದಲಾಗಿದೆ :**
1) ಸರ್ಕಾರದ ಆದೇಶದ ಸಂಖ್ಯೆ: ಮಮಇ 173 ಪಿಎಚ್‌ಪಿ 2010, ದಿನಾಂಕ 12–05–2011
2) ತಿದ್ದುಪಡಿ ಸಂಖ್ಯೆ: ಮಮಇ 173 ಪಿಎಚ್‌ಪಿ 2010, ದಿನಾಂಕ 29–07–2011
3) ಸರ್ಕಾರದ ಆದೇಶದ ಸಂಖ್ಯೆ: ಮಮಇ 173 ಪಿಎಚ್‌ಪಿ 2010, ದಿನಾಂಕ 28–09–2011
4) ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆ ಇವರ ಪತ್ರ ಸಂಖ್ಯೆ: ನಿಅಕಇ/ಜಿ.ಅಂ.ಪು.ಕೇಂ/ಸಿ–9/31/2010–11/2739, ದಿನಾಂಕ 03–11–2011

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿ ರಾಜ್ಯದ ಮೈಸೂರು, ಗದಗ ಮತ್ತು ರಾಯಚೂರು ಜಿಲ್ಲೆಗಳ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರಗಳನ್ನು (ಡಿ.ಡಿ.ಆರ್.ಸಿ) 2011–12ನೇ ಸಾಲಿನಿಂದ ರಾಜ್ಯ ಅನುದಾನದಡಿ ಆಯಾ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿರುವ ಜಿಲ್ಲಾ ನಿರ್ವಹಣಾ ಸಮಿತಿಯಲ್ಲಿ ಆಯ್ಕೆಗೊಳ್ಳುವ ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿ ಮುಖಾಂತರ ನಡೆಸಲು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಲಾಗಿತ್ತು.

ಮೇಲೆ ಓದಲಾದ (2)ರಲ್ಲಿ ದಿನಾಂಕ 12–05–2011ರ ಸರ್ಕಾರಿ ಆದೇಶ ಸಂಖ್ಯೆ: ಮಮಇ 173 ಪಿಎಚ್‌ಪಿ 2010ರ ಅನುಬಂಧ–1, 2 ಮತ್ತು 3ರ ಬದಲಿಗೆ ತಿದ್ದುಪಡಿ ಆದೇಶಕ್ಕೆ ಹೊಸದಾಗಿ ಲಗತ್ತಿಸಿರುವ ಅನುಬಂಧ–1, 2 ಮತ್ತು 3ನ್ನು ಸೇರಿಸಿ ತಿದ್ದಿ ಓದಿಕೊಳ್ಳತಕ್ಕದ್ದು ಎಂದು ಆದೇಶಿಸಲಾಗಿತ್ತು.

ಮೇಲೆ ಓದಲಾದ (3)ರಲ್ಲಿ ಸರ್ಕಾರದ ಆದೇಶ ಸಂಖ್ಯೆ: ಮಮಇ 173 ಪಿಎಚ್‌ಪಿ 2010, ದಿನಾಂಕ 12–05–2011 ಹಾಗೂ ತಿದ್ದುಪಡಿ ಸಂಖ್ಯೆ ಮಮಇ 173 ಪಿಎಚ್‌ಪಿ 2010, ದಿನಾಂಕ 29–07–2011ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದೆ. ಕರ್ನಾಟಕ ರಾಜ್ಯದ ಗದಗ ಜಿಲ್ಲೆಯಲ್ಲಿ ಸೆಪ್ಟೆಂಬರ್ 2011 ರಿಂದ ಹಾಗೂ ಮೈಸೂರು, ರಾಯಚೂರು ಮತ್ತು ಹಾವೇರಿ ಜಿಲ್ಲೆಯಲ್ಲಿ ಅಕ್ಟೋಬರ್ 2011 ರಿಂದ ಕ್ರಮವಾಗಿ ರೂ. 19,25,800/– (ರೂಪಾಯಿ ಹತ್ತೊಂಭತ್ತು ಲಕ್ಷದ ಇಪ್ಪತ್ತೈದು ಸಾವಿರದ ಎಂಟು ನೂರುಗಳು ಮಾತ್ರ) ರೂ. 14,36,400/– (ರೂಪಾಯಿ ಹದಿನಾಲ್ಕು ಲಕ್ಷದ ಮೂವತ್ತಾರು ಸಾವಿರದ ನಾಲ್ಕು ನೂರು ಮಾತ್ರ) ರೂ. 17,36,400/– (ರೂಪಾಯಿ ಹದಿನೇಳು ಲಕ್ಷದ ಮೂವತ್ತಾರು ಸಾವಿರದ ನಾಲ್ಕು ನೂರು ಮಾತ್ರ) ಮತ್ತು ರೂ. 17,36,400/–(ರೂಪಾಯಿ ಹದಿನೇಳು ಲಕ್ಷದ ಮೂವತ್ತಾರು ಸಾವಿರದ ನಾಲ್ಕು ನೂರು ಮಾತ್ರ) ಗಳ ವೆಚ್ಚದಲ್ಲಿ ಸದರಿ ಆದೇಶಕ್ಕೆ ಲಗತ್ತಿಸಲಾದ ಅನುಬಂಧ–1 ರಿಂದ 4ರಲ್ಲಿರುವಂತೆ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರಗಳನ್ನು (ಡಿ.ಡಿ.ಆರ್.ಸಿ.) ರಾಜ್ಯ ಅನುದಾನದಡಿ ಆಯಾಯ ಜಿಲ್ಲೆಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿರುವ ಜಿಲ್ಲಾ ನಿರ್ವಹಣಾ ಸಮಿತಿಯಲ್ಲಿ ಆಯ್ಕೆಗೊಳ್ಳುವ ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿ ಮುಖಾಂತರ, ಅನುಬಂಧ–5ರಲ್ಲಿ ಸೂಚಿಸಿರುವಂತೆ ಯೋಜನೆಯ ಮಾರ್ಗಸೂಚಿಯನುಸಾರ ನಡೆಸಲು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ (4)ರಲ್ಲಿ ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ಇವರು ಬೆಂಗಳೂರು ನಗರದಲ್ಲಿ ರಾಜ್ಯ ಸಲಹಾ ಕೇಂದ್ರದ ಬದಲಿಗೆ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರವನ್ನು ಪ್ರಾರಂಭಿಸಲು ನಿರ್ಧರಿಸಲಾಗಿದ್ದು, ಪ್ರಸಕ್ತ ಸಾಲಿಗೆ ಲೆಕ್ಕಶೀರ್ಷಿಕೆ 2235-02-101-0-99 ಯೋಜನೆ ಉಪಲೆಕ್ಕಶೀರ್ಷಿಕೆ 100 ರಡಿಯಲ್ಲಿ ಒದಗಿಸಿರುವ ಆಯವ್ಯಯ ರೂ. 255.94 ಲಕ್ಷಗಳನ್ನು ಜಿಲ್ಲಾ ಪುನರ್ವಸತಿ ಕೇಂದ್ರಗಳನ್ನು ಪ್ರಾರಂಭಿಸಲು ರೂ. 100.00 ಲಕ್ಷ ನಿಗದಿಪಡಿಸಿಕೊಳ್ಳಲಾಗಿದ್ದು. ಇದರಲ್ಲಿ ಇದುವರೆಗೆ ರೂ. 68,35,000/- ಬಿಡುಗಡೆ ಮಾಡಿದ್ದು ರೂ. 31,65,000/-ಗಳು ಉಳಿತಾಯವಾಗಿರುತ್ತದೆ. ಸದರಿ ಉಳಿಕೆ ಮೊತ್ತದಲ್ಲಿ ಬೆಂಗಳೂರಿನಲ್ಲಿ ಜಿಲ್ಲಾ ಅಂಗವಿಕಲರ ಪನರ್ವಸತಿ ಕೇಂದ್ರ ಪ್ರಾರಂಭಿಸಬಹುದಾಗಿರುತ್ತದೆ. ಈ ಕೇಂದ್ರಕ್ಕಾಗಿ 2011-12ನೇ ಸಾಲಿಗೆ ಡಿಸೆಂಬರ್ 2011 ರಿಂದ ಮಾರ್ಚ್ 2012 ರವರೆಗೆ ರೂ. 12,05,600/-ಗಳು ವೆಚ್ಚವಾಗಲಿದ್ದು ಸದರಿ ಮೊತ್ತವನ್ನು ಬೆಂಗಳೂರಿನಲ್ಲಿ ಈ ಕೇಂದ್ರ ಪ್ರಾರಂಭಿಸಲು ಸಹಮತಿಸಿರುವ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಗೆ ಪಾವತಿಸಲು ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು, ಬೆಂಗಳೂರು ನಗರ ಇವರಿಗೆ ಆಯವ್ಯಯವನ್ನು ಬಿಡುಗಡೆ ಮಾಡಲು ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 251 ಪಿಎಚ್‌ಪಿ 2011, ಬೆಂಗಳೂರು, ದಿನಾಂಕ 14-12-2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯದ ಬೆಂಗಳೂರು ನಗರ ಜಿಲ್ಲೆಯಲ್ಲಿ ಡಿಸೆಂಬರ್ 2011 ರಿಂದ ರೂ. 12,05,600/- (ರೂಪಾಯಿ ಹನ್ನೆರಡು ಲಕ್ಷದ ಐದು ಸಾವಿರದ ಆರುನೂರು ಮಾತ್ರ) ಗಳ ವೆಚ್ಚದಲ್ಲಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರವನ್ನು (ಡಿ.ಡಿ.ಆರ್.ಸಿ.) ರಾಜ್ಯ ಅನುದಾನದಡಿ ಬೆಂಗಳೂರು ನಗರ ಜಿಲ್ಲೆಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿರುವ ಜಿಲ್ಲಾ ನಿರ್ವಹಣಾ ಸಮಿತಿಯಲ್ಲಿ ಆಯ್ಕೆಗೊಳ್ಳುವ ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿ ಮುಖಾಂತರ ಯೋಜನೆಯ ಮಾರ್ಗಸೂಚಿಯನುಸಾರ ನಡೆಸಲು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ಸದರಿ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರದ ಪ್ರಸ್ತಾವನೆಯನ್ನು ಸಂಬಂಧಪಟ್ಟ ಸಂಸ್ಥೆಯಿಂದ ಪಡೆದು ಆಯವ್ಯಯವನ್ನು ನೇರವಾಗಿ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳಿಗೆ ಬಿಡುಗಡೆ ಮಾಡಲು ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ. ಸದರಿ ಜಿಲ್ಲಾ ಅಂಗವಿಕಲರ ಪನರ್ವಸತಿ ಕೇಂದ್ರವನ್ನು ಈಗಾಗಲೇ ರಾಜ್ಯ ಸಲಹಾ ಕೇಂದ್ರದಲ್ಲಿ ಲಭ್ಯವಿರುವ ಯಂತ್ರೋಪಕರಣಗಳು ಹಾಗೂ ಉಪಕರಣಗಳನ್ನು (Rehabilitation equipments and machineries) ಉಪಯೋಗಿಸಿಕೊಂಡು ನಿರ್ವಹಿಸತಕ್ಕದ್ದು.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2235-02-101-0-99 ಯೋಜನೆ ಉ.ಲೆ.ಶೀ. 100 ಧನಸಹಾಯ ಮತ್ತು ಪರಿಹಾರ ಅಡಿಯಲ್ಲಿ 2011-12ನೇ ಸಾಲಿಗೆ ಒದಗಿಸಿರುವ ಆಯವ್ಯಯದಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ-2

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಅನುಬಂಧ

ಬೆಂಗಳೂರು ನಗರ ಜಿಲ್ಲೆಯಲ್ಲಿ 2011-12ನೇ ಸಾಲಿನ ಡಿಸೆಂಬರ್-11 ರಿಂದ ಮಾರ್ಚ್-12ರವರೆಗೆ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ, ಜಿಲ್ಲಾ ಶಾಖೆ ಇವರ ವತಿಯಿಂದ ನಡೆಸಲು ಬೇಕಾಗುವ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರದ ಅನುಷ್ಠಾನಕ್ಕೆ ಆಯವ್ಯಯ.

| **I ಆವರ್ತಕ ವೆಚ್ಚಗಳು** | | | | | |
|---|---|---|---|---|---|
| **ಕ್ರಸಂ.** | **ಹುದ್ದೆಗಳ ವಿವರ** | | | **ಮಾಸಿಕ ಗೌರವಧನ** | **ಬೇಕಾಗುವ ಆಯವ್ಯಯ** |
| | **ಹುದ್ದೆ** | **ಸಂಖ್ಯೆ** | **ವಿದ್ಯಾರ್ಹತೆ ಅನುಭವ** | | |
| 1 | ನೋಡಲ್ ಆಫೀಸರ್/ಸಮಾಜ ಸೇವಾ ಕಾರ್ಯಕರ್ತರು (ಯೂನಿಟ್ ಇನ್ ಚಾರ್ಜ್) | 01 | ಎಂ.ಎಸ್.ಡಬ್ಲ್ಯೂ ಪುನರ್ವಸತಿ ಸೇವೆ ಅನುಭವ | 15000X4 | 60000 |
| 2 | ಅಕೌಂಟೆಂಟ್ ಕಂ ಕ್ಲರ್ಕ್ | 01 | ಬಿ.ಕಾಂ ಪದವಿ ಗಣಕ ಯಂತ್ರದ ಅನುಭವ | 8000X4 | 32000 |
| 3 | ಸ್ಟೋರ್ ಕೀಪರ್ ಕಂ ಕ್ಲರ್ಕ್ | 01 | ಪದವಿ ಗಣಕ ಯಂತ್ರದ ಅನುಭವ | 6000X4 | 24000 |
| 4 | ಕಂಪ್ಯೂಟರ್ ಆಪರೇಟರ್ | 01 | ಕಂಪ್ಯೂಟರ್ ಜ್ಞಾನ ಹೊಂದಿರಬೇಕು | 5000X4 | 20000 |
| 5 | ಕಛೇರಿ ಸೇವಕ | 01 | 7ನೇ ತರಗತಿ | 4000X4 | 16000 |
| 6 | ರಾತ್ರಿ ಕಾವಲುಗಾರರು | 01 | 7ನೇ ತರಗತಿ | 4000X4 | 16000 |
| 7 | ಕೃತಕಾಂಗ ಜೋಡಣೆ ಪಿ & ಒ ಅಭಿಯಂತರರು | 01 | ಪಿ & ಒ ಇಂಜಿನಿಯರಿಂಗ್ ಪದವಿ/ಡಿಪ್ಲೋಮ 2 ರಿಂದ 5 ವರ್ಷ ಅನುಭವ | 15000X4 | 60000 |
| 8 | ಪ್ರಾಸ್ಥೊಟಿಸ್ಟ್ & ಆರ್ಥೋಟಿಸ್ಟ್ | 02 | ಡಿಪ್ಲೊಮ ಇನ್ ಪಿ & ಒ/ ಐಟಿಐ (ಫಿಟ್ಟರ್) 2 ವರ್ಷದ ಕ್ಷೇತ್ರ ಮಟ್ಟದ ಅನುಭವ | 10000X4 | 80000 |
| 9 | ಲೆದರ್ ವರ್ಕರ್/ಶೂ ಮೇಕರ್ | 01 | ಸರ್ಟಿಫಿಕೇಟ್ ಇನ್ ಲೆದರ್ ವರ್ಕಿಂಗ್ & ಶೂ ಮೇಕಿಂಗ್ 2 ವರ್ಷದ ಕ್ಷೇತ್ರ ಮಟ್ಟದ ಅನುಭವ | 5000X4 | 20000 |

| | | | | | |
|---|---|---|---|---|---|
| 10 | ಕ್ಲಿನಿಕಲ್ ಸೈಕಾಲಜಿಸ್ಟ್ (ವಾರಕ್ಕೆ 03 ದಿನಗಳು, ದಿನಕ್ಕೆ ರೂ. 1000/–ಗಳಂತೆ) | 01 | ಎಂ.ಎ. ಇನ್ ಕ್ಲಿನಿಕಲ್ ಸೈಕಾಲಜಿ | 12000X4 | 48000 |
| 11 | ಸ್ಪೀಚ್ ಥೆರಪಿಸ್ಟ್ & ಆಡಿಯಾಲಜಿಸ್ಟ್ (ವಾರಕ್ಕೆ 03 ದಿನಗಳು, ದಿನಕ್ಕೆ ರೂ 1000/– ಗಳಂತೆ) | 01 | ಡಿಗ್ರಿ ಇನ್ ಸ್ಪೀಚ್ ಪೆಥಾಲಜಿ & ಆಡಿಯಾಲಜಿ | 12000X4 | 48000 |
| 12 | ಫಿಸಿಯೋ ಥೆರಪಿಸ್ಟ್/ಆಕ್ಯುಪೇಷನಲ್ ಥೆರಪಿಸ್ಟ್ (ವಾರಕ್ಕೆ 3 ದಿನಗಳು, ದಿನಕ್ಕೆ ರೂ. 1000/–ಗಳಂತೆ) | 01 | ಡಿಗ್ರಿ ಇನ್ ಫಿಸಿಯೋಥೆರಪಿ ಅಥವಾ ಆಕ್ಯುಪೇಷನ್ ಥೆರಪಿ | 12000X4 | 48000 |
| 13 | ಮೊಬಿಲಿಟಿ ಇನ್ಸ್‌ಟ್ರಕ್ಟರ್ | 01 | ಸರ್ಟಿಫಿಕೇಟ್ ಕೋರ್ಸ್ ಇನ್ ಒ & ಎಂ | 5000X4 | 20000 |
| 14 | ಸ್ಪೆಷಲ್ ಎಜುಕೇಟರ್ (ಹೆಚ್.ಐ., ವಿ.ಐ., & ಎಂ.ಆರ್.) | 03 | ಡಿಪ್ಲೊಮಾ ಇನ್ ಸ್ಪೆಷಲ್ ಎಜುಕೇಷನ್ ಹೆಚ್.ಐ., ವಿ.ಐ., & ಎಂ.ಆರ್. | 5000X4 | 60000 |
| 15 | ಇಯರ್ ಮೋಲ್ಡ್ ಟೆಕ್ನಿಷಿಯನ್ | 01 | ಸರ್ಟಿಫಿಕೇಟ್ ಕೋರ್ಸ್ ಇನ್ ಇಯರ್ ಮೋಲ್ಡ್ ಟೆಕ್ನಾಲಜಿ | 5000X4 | 20000 |
| 16 | ಕೀಲು ಮತ್ತು ಮೂಳೆ ತಜ್ಞರು (ವಾರಕ್ಕೆ 03 ದಿನಗಳು, ದಿನಕ್ಕೆ ರೂ. 675/–ಗಳಂತೆ) | 01 | ಪೋಸ್ಟ್ ಗ್ರಾಜುಯೇಷನ್ ಅಥವಾ ಡಿಪ್ಲೊಮಾ ಇನ್ ಆರ್ಥೋಪೆಡಿಕ್ಸ್ | 8100X4 | 32400 |
| 17 | ಆಪ್ತಾಲ್ಮೊಲಜಿಸ್ಟ್ (ವಾರಕ್ಕೆ 03 ದಿನಗಳು, ದಿನಕ್ಕೆ ರೂ. 675/–ಗಳಂತೆ) | 01 | ಪೋಸ್ಟ್ ಗ್ರಾಜುಯೇಷನ್/ಡಿಪ್ಲೊಮ ಇನ್ ಆಪ್ತಾಲ್ಮೊಲಜಿ | 8100X4 | 32400 |
| 18 | ಇ ಎನ್ ಟಿ ಸ್ಪೆಷಲಿಸ್ಟ್ (ವಾರಕ್ಕೆ 03 ದಿನಗಳು, ದಿನಕ್ಕೆ ರೂ 675/–ಗಳಂತೆ) | 01 | ಪೋಸ್ಟ್ ಗ್ರಾಜುಯೇಷನ್/ಡಿಪ್ಲೊಮ ಇನ್ ಇ.ಎನ್.ಟಿ. | 8100X4 | 32400 |
| 19 | ಸೈಕಿಯಾಟ್ರಿಸ್ಟ್ (ವಾರಕ್ಕೆ 03 ದಿನಗಳು, ದಿನಕ್ಕೆ ರೂ. 675/– ಗಳಂತೆ) | 01 | ಪೋಸ್ಟ್ ಗ್ರಾಜುಯೇಷನ್/ಸೈಕಿಯಾಟ್ರಿ ಮೆಡಿಸಿನ್ | 8100X4 | 32400 |
| 20 | ಕಟ್ಟಡ ನಿರ್ವಹಣೆ | – | – | 3000X4 | 12000 |
| 21 | ಪ್ರಯಾಣ ವೆಚ್ಚಗಳು | – | – | 10000X4 | 40000 |
| 22 | ಕಛೇರಿ ವೆಚ್ಚಗಳು | – | – | 4000X4 | 16000 |
| 23 | ಲೇಖನ ಸಾಮಗ್ರಿ/ಪೋಸ್ಟೇಜ್ | – | – | 4000X4 | 16000 |
| 24 | ಇತರೆ ವೆಚ್ಚಗಳು | – | – | 5000X4 | 20000 |
| | | | | **(I) ಒಟ್ಟು ರೂ.** | **8,05,600** |
| **II ಅನಾವರ್ತಕ ವೆಚ್ಚಗಳು** | | | | | |
| 1 | ಮೆಷಿನರಿ & ಎಕ್ವಿಪ್‌ಮೆಂಟ್ಸ್ | – | | | 300000 |
| 2 | ಕಂಪ್ಯೂಟರ್/ಪರಿಕರಗಳು | – | | | 50000 |
| 3 | ಪೀಠೋಪಕರಣಗಳು | – | | | 50000 |
| | | | | **(II) ಒಟ್ಟು ರೂ.** | **4,00,000** |
| | | | | **ಒಟ್ಟು ಮೊತ್ತ ರೂ. (I) + (II)** | **12,05,600** |
| **(ರೂಪಾಯಿ ಹನ್ನೆರಡು ಲಕ್ಷದ ಐದು ಸಾವಿರದ ಆರುನೂರು ಮಾತ್ರ)** | | | | | |

ಬಿ. ಕಮಲಮ್ಮ

ಪಿ.ಆರ್. 139

ಸರ್ಕಾರದ ಅಧೀನ ಕಾರ್ಯದರ್ಶಿ–2
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** 2007–08ನೇ ಸಾಲಿನಲ್ಲಿ ರಾಜ್ಯದ 14 ಜಿಲ್ಲೆಗಳಲ್ಲಿ ನಡೆಸಿದ ಮಾಜಿ ದೇವದಾಸಿ ಮಹಿಳೆಯರ ಮರು ಸಮೀಕ್ಷಾ ವರದಿಯನ್ನು ಅನುಮೋದಿಸುವ ಕುರಿತು–ಆದೇಶ.

**ಓದಲಾಗಿದೆ :**
1) ಸರ್ಕಾರದ ಆದೇಶದ ಸಂಖ್ಯೆ: ಮಮಇ 14/ ಮಅನಿ/2007, ದಿನಾಂಕ 13–09–2007
2) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವರ ಪತ್ರ ಸಂಖ್ಯೆ: ಮಅನಿ/ದೇಪುಯೋ/ಮಸ/40/2010–11/906, ದಿನಾಂಕ 23–03–2011.
3) ದಿನಾಂಕ 30–07–2011 ರಂದು ಮುಖ್ಯ ಕಾರ್ಯದರ್ಶಿ ಇವರುಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮವು ದೇವದಾಸಿ ಪದ್ಧತಿಯ ನಿರ್ಮೂಲನೆಗಾಗಿ 1993–94ನೇ ಸಾಲಿನಲ್ಲಿ ರಾಜ್ಯದ 10 ಜಿಲ್ಲೆಗಳಲ್ಲಿ (ಬೆಳಗಾಂ/ಬಿಜಾಪುರ/ಬಾಗಲಕೋಟೆ/ರಾಯಚೂರು/ಕೊಪ್ಪಳ/ಬಳ್ಳಾರಿ/ಗುಲ್ಬರ್ಗಾ/ಗದಗ/ಹಾವೇರಿ ಮತ್ತು ಧಾರವಾಡ) 22873 ದೇವದಾಸಿ ಮಹಿಳೆಯರನ್ನು ಗುರ್ತಿಸಿ, ಸಮಾಜದ ಮುಖ್ಯವಾಹಿನಿಗೆ ತರಲು (1) ದೇವದಾಸಿ ಮಹಿಳೆಯರ ಪುನರ್ವಸತಿ ಯೋಜನೆ (2) ದೇವದಾಸಿ

ಮಹಿಳೆಯರಿಗೆ ಮಾಸಾಶನ (3) ದೇವದಾಸಿ ಮಹಿಳೆಯರಿಗೆ ವಸತಿ ಕಲ್ಪಿಸುವ ಯೋಜನೆ ಕಾರ್ಯಕ್ರಮಗಳನ್ನು ಮುಂದುವರೆದ ಯೋಜನಾ ಕಾರ್ಯಕ್ರಮದಡಿ ಅನುಷ್ಠಾನಗೊಳಿಸುತ್ತಿದೆ. ಮುಂದುವರೆದಂತೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಉಳಿದ 14 ಜಿಲ್ಲೆಗಳಲ್ಲಿ (ಬೆಳಗಾಂ/ಬಿಜಾಪುರ/ಬಾಗಲಕೋಟೆ/ ರಾಯಚೂರು / ಕೊಪ್ಪಳ / ಬಳ್ಳಾರಿ / ಗುಲ್ಬರ್ಗಾ / ಗದಗ / ಹಾವೇರಿ / ಧಾರವಾಡ / ಚಿತ್ರದುರ್ಗ / ಶಿವಮೊಗ್ಗ / ದಾವಣಗೆರೆ / ಬೀದರ್) ಇರಬಹುದಾದ ದೇವದಾಸಿಯರ ಮರು ಸಮೀಕ್ಷೆಯನ್ನು ಮಾರ್ಗಸೂಚಿಗಳ ಪ್ರಕಾರ ರೂ. 35.00 ಲಕ್ಷಗಳ ವೆಚ್ಚ ಮತ್ತು ಈ ಮರು ಸಮೀಕ್ಷಾ ಕಾರ್ಯಕ್ಕೆ ಕಂದಾಯ ಇಲಾಖೆಯ ಗ್ರಾಮ ಲೆಕ್ಕಿಗರು ಹಾಗೂ ನಗರಾಭಿವೃದ್ಧಿ ಇಲಾಖೆಯ ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿನ ಅಧಿಕಾರಿಗಳ ಸಹಕಾರವನ್ನು ಬಳಸಿಕೊಂಡು ಮರು ಸಮೀಕ್ಷೆಯನ್ನು ನಡೆಸಲು ಸರ್ಕಾರವು ಮಂಜೂರಾತಿಯನ್ನು ನೀಡಿದೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವರ ಮೇಲೆ ಓದಲಾದ (2)ರ ಪ್ರಸ್ತಾವನೆಯಲ್ಲಿ ಪ್ರಯೋಜನಾರ್ಥಿಗಳ ಪಟ್ಟಿಗಳ ತಯಾರಿಯ ವ್ಯವಹರಣೆಯನ್ನು ಉಪ ನಿರ್ದೇಶಕರುಗಳೊಂದಿಗೆ ಚರ್ಚಿಸಿ, 2007ರಲ್ಲಿ ತಯಾರಿಸಲಾದ ಪಟ್ಟಿಯಲ್ಲಿ ದೇವದಾಸಿ ಕುಟುಂಬ ಅನುಸೂಚಿಯನ್ನು ತುಂಬಿಸಿರುವುದರಿಂದ ಪಟ್ಟಿಯು ಜವಾಬ್ದಾರಿಯುತವಾಗಿದ್ದು, ವ್ಯಾಪಕವಾದ ಮೇಲ್ವಿಚಾರಣೆಯಿಂದ ತಯಾರಿಸಿರುವುದರಿಂದ, ಸದರಿ ಪಟ್ಟಿಯನ್ನು ಅಂತಿಮಗೊಳಿಸುವುದು ಸೂಕ್ತವಿದೆ ಎಂದು ಬಳ್ಳಾರಿ ಮತ್ತು ಬೀದರ್ ಜಿಲ್ಲೆಗಳಲ್ಲಿ 2007ನೇ ಸಾಲಿನಲ್ಲಿ ನಡೆಸಿದ ಸಮೀಕ್ಷೆಯ ನಂತರ ಪುನರ್ ಪರಿಶೀಲನೆ ಮಾಡಿರುವ ಬಗ್ಗೆ ಹೆಚ್ಚುವರಿ ಮಾಹಿತಿಯನ್ನು ಗ್ರಹಿಸಲಾಗಿದ್ದು, ಸಂಖ್ಯೆಗಳ ನೈಜತೆಯ ಬಗ್ಗೆ ಖಾತರಿಪಡಿಸಿಕೊಳ್ಳಲಾಗಿದೆಯೆಂದು ಮತ್ತು ಬೀದರ್ ಜಿಲ್ಲೆಯಲ್ಲಿ ದೇವದಾಸಿ ಪದ್ಧತಿ ಇಲ್ಲದೇ ಇದ್ದರೂ, ಅಲ್ಲಿ ಕೆಲವು ಸಮಾಜಗಳಲ್ಲಿ ದೇವರಿಗೆ ನಡೆದುಕೊಳ್ಳುವ ಪದ್ಧತಿಯಿದೆ. ಇದರಲ್ಲಿ ಮದುವೆಯಾದ ಮಹಿಳೆಯರು ಭೂತೆಯರು ಎಂಬ ವಿಭಿನ್ನ ಕ್ರಮ ಅನುಸರಿಸುತ್ತಾರಲ್ಲದೆ ಸಾಂಸಾರಿಕ ಜೀವನದಲ್ಲಿರುವುದರಿಂದ, ಇವರುಗಳಿಗೆ ಪುನರ್ವಸತಿ ಪ್ರಶ್ನೆ ಉದ್ಭವಿಸುವುದಿಲ್ಲವೆಂದು, ವಿವರಿಸಿ 23787 ಪ್ರಯೋಜಾನಾರ್ಥಿಗಳ ಪಟ್ಟಿಯನ್ನು ವಿಳಂಬಿಸದೇ ದಿನಾಂಕ 01-05-2011 ರಂದು ಅವರವರ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಛೇರಿಯಲ್ಲಿ ಪ್ರಕಟಿಸುವ ಮೂಲಕ ದೇವದಾಸಿ ಮಹಿಳೆಯರ ಪುನರ್ವಸತಿ ಯೋಜನೆಯನ್ನು ಜಾರಿಗೆ ತರುವುದು ಸೂಕ್ತವೆಂದು ಅಭಿಪ್ರಾಯಿಸಿ ಹಾಲಿ ನಿಗಮದಲ್ಲಿ ಮಾಜಿ ದೇವದಾಸಿ ಮಹಿಳೆಯರಿಗೆ ಕಲ್ಪಿಸುತ್ತಿರುವ ಮುಂದುವರೆದ ಯೋಜನಾ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ರೂ. 15.00 ಕೋಟಿಗಳ ಅನುದಾನ ಅವಶ್ಯಕತೆಯಿದೆಯೆಂದು ಭಾವಿಸಿ ಇದರಲ್ಲಿನ ಹಚ್ಚಿನ ಭಾಗವನ್ನು ಸಮಾಜ ಕಲ್ಯಾಣ ಇಲಾಖೆಯಿಂದ ಪಡೆಯಬಹುದೆಂದು ಅಭಿಪ್ರಾಯಿಸಿ, ಮೇಲಿನ ಶಿಫಾರಸ್ಸುಗಳೊಂದಿಗೆ ದೇವದಾಸಿ ಪುನರ್ವಸತಿಯನ್ನು 2011-12ನೇ ಸಾಲಿನಲ್ಲಿ 14 ಜಿಲ್ಲೆಗಳಲ್ಲಿ (ಬೀದರ್ ಹೊರತುಪಡಿಸಿ, ಯಾದಗಿರಿ ಜಿಲ್ಲೆಯನ್ನೊಳಗೊಂಡಂತೆ) ದಿನಾಂಕ 01-05-2011ರಂದು ಪ್ರಾರಂಭಿಸಲು ಜರೂರು ಅನುಮೋದನೆಯನ್ನು ಕೋರಿರುತ್ತಾರೆ.

ಮೇಲೆ ಓದಲಾದ [3]ರಲ್ಲಿ ದಿನಾಂಕ 30-07-2011ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ 2ನೇ ಸಮೀಕ್ಷೆಯಲ್ಲಿ ಗುರುತಿಸಿರುವ 23787 ಮಾಜಿ ದೇವದಾಸಿ ಮಹಿಳೆಯರ ಪಟ್ಟಿಗೆ ಅನುಮೋದನೆ ನೀಡಿ, ಅವರಿಗೂ ಸಹ ಈ ಮೊದಲು 1993-94ನೇ ಸಾಲಿನಲ್ಲಿ ಗುರುತಿಸಿರುವ ಮಾಜಿ ದೇವದಾಸಿ ಮಹಿಳೆಯರಿಗೆ ನೀಡುತ್ತಿರುವ ಸೌಲಭ್ಯದಂತೆ ಮಾಸಾಶನ/ವಸತಿ ಸೌಲಭ್ಯ/ಕಿರು ಸಾಲ/ಆದಾಯ ಉತ್ಪನ್ನಕರ ಚಟುವಟಿಕೆ/ಯೋಜನಾ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮಕ್ಕೆ ಮುಂದುವರೆದ ಯೋಜನೆಯ ಲೆಕ್ಕ ಶೀರ್ಷಿಕೆಯಲ್ಲಿ ಅವಶ್ಯ ಅನುದಾನವನ್ನು 2012-2013ನೇ ಸಾಲಿನಲ್ಲಿ ಒದಗಿಸಲು ಕ್ರಮ ಕೈಗೊಳ್ಳುವುದು ಹಾಗೂ ಮಾಜಿ ದೇವದಾಸಿ ಮಹಿಳೆಯರಿಗೆ ಮಾಸಾಶನ ಯೋಜನೆ ಸೌಲಭ್ಯವನ್ನು ಕಲ್ಪಿಸುವ ಸಂಬಂಧ ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದವರಿಗೆ ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಯೋಜನೆಯಡಿ ಕ್ರೋಢೀಕರಿಸಿದ upfront pool ಅನುದಾನದಿಂದ ರೂ. 12.00 ಕೋಟಿಗಳನ್ನು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮಕ್ಕೆ ಮರು ಹಂಚಿಕೆಗೊಳಿಸುವ ಪ್ರಸ್ತಾವನೆಗೆ ಸಮಾಜ ಕಲ್ಯಾಣ ಇಲಾಖೆಯು ರಾಜ್ಯ ಉನ್ನತ ಮಟ್ಟದ ಅನುಮೋದನೆ ಪಡೆದು ಅನುದಾನವನ್ನು ಒದಗಿಸುವಂತೆ ನಿರ್ಣಯಿಸಲಾಯಿತು.

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು 2007-08ನೇ ಸಾಲಿನಲ್ಲಿ ಸೂಕ್ತ ಮಾನದಂಡಗಳ ಆಧಾರದ ಮೇಲೆ ರಾಜ್ಯದ 14 ಜಿಲ್ಲೆಗಳಲ್ಲಿ ಸಮೀಕ್ಷೆ ಕೈಗೊಂಡು ಅದರಂತೆ ಪರಿಷ್ಕೃತ 23787 ಮಾಜಿ ದೇವದಾಸಿಯರನ್ನು ಗುರುತಿಸಿರುವುದರಿಂದ, ಇವರುಗಳಿಗೆ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಲ್ಲಿ ಆರ್ಥಿಕ ಸಬಲೀಕರಣ ಹಾಗೂ ಪುನರ್ವಸತಿ ಯೋಜನೆಯನ್ನು ಕಲ್ಪಿಸುವ ಬಗ್ಗೆ ಈಗಾಗಲೇ ಇರುವ ಕಾರ್ಯಕ್ರಮಗಳ ಮೂಲಕ ಪುನರ್ವಸತಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಬೇಕಾದ ಹಿನ್ನೆಲೆಯಲ್ಲಿ, ಮರು ಸಮೀಕ್ಷೆಯಲ್ಲಿ ಗುರುತಿಸಲ್ಪಟ್ಟ ಮಾಜಿ ದೇವದಾಸಿಯರ ಸಮೀಕ್ಷೆಗೆ ತಾತ್ವಿಕ ಅನುಮೋದನೆಯನ್ನು ನೀಡಲು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 25 ಮಅನಿ 2009 (1), ಬೆಂಗಳೂರು, ದಿನಾಂಕ 08-12-2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮವು 2007-08ನೇ ಸಾಲಿನಲ್ಲಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ರಾಜ್ಯದ 14 ಜಿಲ್ಲೆಗಳಲ್ಲಿ ನಡೆಸಿರುವ ಮಾಜಿ ದೇವದಾಸಿ ಮಹಿಳೆಯರ ಮರು ಸಮೀಕ್ಷಾ ವರದಿಯನ್ನು ಸರ್ಕಾರವು ಅನುಮೋದಿಸಿ ಮಂಜೂರಾತಿ ನೀಡಿದೆ.

ಈ ಆದೇಶವನ್ನು ದಿನಾಂಕ 30-07-2011 ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಅನುಮೋದನೆ ನೀಡಲು ತೀರ್ಮಾನಿಸಿರುವಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ-2

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ಸರ್ಕಾರದ ಆದೇಶ ಸಂಖ್ಯೆ: ಮಮಇ 25 ಮಅನಿ 2009 (1), ದಿನಾಂಕ 08–12–2011ಕ್ಕೆ ಅನುಬಂಧ**

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | 2007–08ನೇ ಸಾಲಿನಲ್ಲಿ ಮರು ಸಮೀಕ್ಷೆಯಲ್ಲಿ ಗುರುತಿಸಲ್ಪಟ್ಟ ಮಾಜಿ ದೇವದಾಸಿಯರ ಸಂಖ್ಯೆ |
|---|---|---|
| 1 | ಗುಲ್ಬರ್ಗ | 864 |
| 2 | ಯಾದಗಿರಿ | 759 |
| 3 | ರಾಯಚೂರು | 1455 |
| 4 | ಧಾರವಾಡ | 282 |
| 5 | ಹಾವೇರಿ | 373 |
| 6 | ಬಾಗಲಕೋಟೆ | 3023 |
| 7 | ಕೊಪ್ಪಳ | 1155 |
| 8 | ಬಿಜಾಪುರ | 2139 |
| 9 | ಬಳ್ಳಾರಿ | 8098 |
| 10 | ಬೆಳಗಾವಿ | 1124 |
| 11 | ಗದಗ್ | 1493 |
| 12 | ಚಿತ್ರದುರ್ಗ | 406 |
| 13 | ಶಿವಮೊಗ್ಗ | 24 |
| 14 | ದಾವಣಗೆರೆ | 2592 |
| | **ಒಟ್ಟು** | **23787** |

**ಬಿ. ಕಮಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ–2
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಪಿ.ಆರ್. 140

## ವಸತಿ ಸಚಿವಾಲಯ

**ವಿಷಯ :** ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತದ ಆಡಳಿತಾತ್ಮಕ ವೆಚ್ಚಕ್ಕಾಗಿ 2011–12ನೇ ಸಾಲಿನ ಎರಡನೇ ತ್ರೈಮಾಸಿಕ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.–

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ವಇ 40 ಹೆಚ್ಎಹೆಚ್ 2010, ದಿನಾಂಕ: 09–06–2011

2) ಪ್ರಧಾನ ವ್ಯವಸ್ಥಾಪಕರು, ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ ರವರ ಪತ್ರ ಸಂಖ್ಯೆ: RGRHCL 09 FIN 08-2011, ದಿನಾಂಕ 19–08–2011.

**ಪ್ರಸ್ತಾವನೆ :**

ಸರ್ಕಾರದ 2011–12ನೇ ಸಾಲಿನ ಆಯವ್ಯಯದಲ್ಲಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತದ ಆಡಳಿತಾತ್ಮಕ ವೆಚ್ಚಕ್ಕಾಗಿ ರೂ. 275.00 ಲಕ್ಷಗಳ ಅನುದಾನವನ್ನು ಒದಗಿಸಿದ್ದು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೊದಲನೇ ತ್ರೈಮಾಸಿಕ ಕಂತಿನ ಅನುದಾನ ರೂ. 68.75 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತದ ಪತ್ರದಲ್ಲಿ ನಿಗಮದ ಆಡಳಿತಾತ್ಮಕ ವೆಚ್ಚಕ್ಕಾಗಿ ಬಾಕಿ ಉಳಿದ ಅನುದಾನ ರೂ. 206.75 ಲಕ್ಷಗಳಲ್ಲಿ ಎರಡನೇ ತ್ರೈಮಾಸಿಕ ಕಂತಿನ ಅನುದಾನ ರೂ. 68.75 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 40 ಹೆಚ್ಎಹೆಚ್ 2011, ದಿನಾಂಕ : 30–08–2011.**

2011–12ನೇ ಸಾಲಿಗೆ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತದ ಆಡಳಿತಾತ್ಮಕ ವೆಚ್ಚದ ಬಾಕಿ ಉಳಿದ ಅನುದಾನ ರೂ. 206.75 ಲಕ್ಷಗಳಲ್ಲಿ ಎರಡನೇ ತ್ರೈಮಾಸಿಕ ಕಂತಿನ ಅನುದಾನವಾಗಿ ರೂ. 68.75 ಲಕ್ಷಗಳನ್ನು (ಅರವತ್ತೆಂಟು ಲಕ್ಷದ ಎಪ್ಪತ್ತೈದು ಸಾವಿರ ರೂ.ಗಳು ಮಾತ್ರ) ಲೆಕ್ಕ ಶೀರ್ಷಿಕೆ 2216–80–191–3–01–059ರಡಿಯಲ್ಲಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಲಾಗಿದೆ.

ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ FD 1 TFP 2010, ದಿನಾಂಕ 20–4–2010 ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಶಿವಲಿಂಗ**
ಪೀಠಾಧಿಕಾರಿಗಳು–2
ವಸತಿ ಇಲಾಖೆ

ಪಿ.ಆರ್. 141

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಮಾಹಿತಿ ಹಕ್ಕು ಅಧಿನಿಯಮ 2005 ಅನ್ನು ಅನುಷ್ಠಾನಕ್ಕಾಗಿ ನೋಡಲ್ ಅಧಿಕಾರಿಯನ್ನು ನೇಮಿಸುವ ಕುರಿತು.–

**ಓದಲಾಗಿದೆ :** ಸಿಆಸುಇ (ಜನಸ್ಪಂದನ ಕೋಶ–ಮಾಹಿತಿ ಹಕ್ಕು) ಇವರ ಸುತ್ತೋಲೆ ಸಂಖ್ಯೆ: ಸಿಆಸುಇ/ 18/ಆರ್‌ಟಿಐ/2011, ದಿನಾಂಕ 03–02–2011.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 117 ಮಸಾವಿ 2010, ಬೆಂಗಳೂರು, ದಿನಾಂಕ 17–12–2011**

**ಪ್ರಸ್ತಾವನೆ :**

ಮಾಹಿತಿ ಹಕ್ಕು ಅಧಿನಿಯಮ 2005ರ ಪರಿಪೂರ್ಣ ಅನುಷ್ಠಾನಕ್ಕಾಗಿ ಜಲಸಂಪನ್ಮೂಲ ಇಲಾಖೆ, ಸಣ್ಣ ನೀರಾವರಿಯಲ್ಲಿ ಸರ್ಕಾರದ ಉಪ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ನೋಡಲ್ ಅಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಲಾಗಿದೆ. ನೋಡಲ್ ಅಧಿಕಾರಿಯು ಕೆಳಕಂಡ ಕರ್ತವ್ಯಗಳನ್ನು ನಿರ್ವಹಿಸಬೇಕಾಗಿದೆ.

1) ಇಲಾಖೆಯಲ್ಲಿರುವ ಎಲ್ಲಾ ಸಾರ್ವಜನಿಕ ಪ್ರಾಧಿಕಾರಗಳ/ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಪಟ್ಟಿಯನ್ನು ನಿರ್ವಹಿಸುವಿಕೆಯನ್ನು/ಕಾಲಕಾಲಕ್ಕೆ up-date ಮಾಡುವಿಕೆಯನ್ನು ದೃಢಪಡಿಸಿಕೊಳ್ಳುವುದು.
2) ಕರ್ನಾಟಕ ಮಾಹಿತಿ ಆಯೋಗಕ್ಕೆ ವಾರ್ಷಿಕ ವರದಿ ತಯಾರಿಸಲು ಬೇಕಾಗುವ ಎಲ್ಲಾ ಮಾಹಿತಿಯನ್ನು ಒದಗಿಸುವುದು.
3) ಮಾಹಿತಿ ಕೋರಿ ಇಲಾಖೆಯಲ್ಲಿ ಸ್ವೀಕೃತವಾಗುವ ಅರ್ಜಿಗಳ ವಿಲೇವಾರಿಯ ಮೇಲ್ವಿಚಾರಣೆ ಮಾಡುವುದು
4) ಮೊದಲು ಮೇಲ್ಮನವಿ ಪ್ರಾಧಿಕಾರಿಗಳು ಮೇಲ್ಮನವಿಗಳ ವಿಚಾರಣೆಗಾಗಿ ದಿನ ನಿಗಧಿಪಡಿಸಿ 30 ದಿನಗಳೊಳಗಾಗಿ ಇತ್ಯರ್ಥಪಡಿಸುವಂತೆ ನೋಡಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 142

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.–

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಯೋಇ 309 ಪಿಟಿಪಿ 94, ದಿನಾಂಕ: 07–08–1995

2) ಭಾರತೀಯ ಜನತಾ ಪಾರ್ಟಿಯ ರಾಜ್ಯಾಧ್ಯಕ್ಷರ ಪತ್ರ ಸಂ.ರಾಕಾ/ನಾನಿ/389/201, ದಿನಾಂಕ 07–09–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ 07–08–1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (2) ಅಂಶಗಳ ಕಾರ್ಯಕ್ರಮವೂ ಸೇರಿದಂತೆ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮಾನ್ಯ ಯೋಜನಾ ಸಚಿವರ ಶಿಫಾರಸ್ಸು ಮೇರೆಗೆ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವಂತೆ ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕಿನ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 109 ಯೋವಿವಿ 2011, ಬೆಂಗಳೂರು, ದಿನಾಂಕ 08–12–2011**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವೂ ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈ ಕೆಳಕಂಡ ಆರು ಜನರನ್ನು ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

**ಚಿತ್ರದುರ್ಗ ಜಿಲ್ಲೆ: ಹಿರಿಯೂರು ತಾಲ್ಲೂಕು**

| ಕ್ರ.ಸಂ. | ಹೆಸರು | ವರ್ಗ |
|---|---|---|
| 1 | ಶ್ರೀ ಬಸವರಾಜ ನಾಯಕ ಬಿನ್ ತಿಮ್ಮಣ್ಣ ನಾಯಕ ಸಿದ್ದನಾಯಕ ಸರ್ಕಲ್, ಹಿರಿಯೂರ ಟೌನ್ | ಎಸ್.ಟಿ. |
| 2 | ಶ್ರೀ ರಾಮಚಂದ್ರಪ್ಪ, C/o. ಎಂ. ಆರ್. ಸ್ವಾಮಿ ನಿಲಯ, ಎನ್. ಹೆಚ್. 4 ಸರ್ವೀಸ್ ರಸ್ತೆ, ಬಿ.ಎಲ್. ಗೌಡನಗರ, ಹಿರಿಯೂರು | ಸಾಮಾನ್ಯ |
| 3 | ಶ್ರೀಮತಿ ಆರ್. ಲೀಲಾವತಿ ಕೋಂ ಉದಯಶಂಕರ್, ಮೇಟಿಕುರ್ಕೆ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ. | ಮಹಿಳೆ |
| 4 | ಶ್ರೀ ಬಿ. ಆರ್. ರಂಗಸ್ವಾಮಿ ಬಿನ್ ರಂಗಪ್ಪ, ಅಂಬಲಗೆರೆ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ | ಸಾಮಾನ್ಯ |
| 5 | ಶ್ರೀ ಸಿ. ಗೋಪಾಲಪ್ಪ ಬಿನ್ ಚಿತ್ತಪ್ಪ, ಯಲ್ಲದಕೆರೆ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ | ಹಿಂ.ವ |
| 6 | ಶ್ರೀ ಪಿ. ಎಸ್. ಸಾದತ್ ಉಲ್ಲಾ ಬಿನ್ ಪಿ.ಎಂ. ಸಮೀಉಲ್ಲಾ, ಮಿರ್ಜಾ ಬಡಾವಣೆ, ವಾರ್ಡ್ ನಂ. 9, ಹಿರಿಯೂರು ಟೌನ್. | ಅ.ಸಂ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ–1 & 2

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

ಪಿ.ಆರ್. 143

## ಪಶುಸಂಗೋಪನೆ ಮತ್ತು ಮೀನುಗಾರಿಕಾ ಸಚಿವಾಲಯ

**ವಿಷಯ :** ಖಿಲಾರ ತಳಿ ಸಂವರ್ಧನಾ ಕೇಂದ್ರ, ಬಂಕಾಪೂರ, ಶಿಗ್ಗಾಂವ್ ತಾಲ್ಲೂಕು, ಹಾವೇರಿ ಜಿಲ್ಲೆ ಇಲ್ಲಿ ಪಶುಸಂಗೋಪನಾ ಪಾಲಿಟೆಕ್ನಿಕ್ ಸ್ಥಾಪಿಸಲು ಆಡಳಿತಾತ್ಮಕ ಮಂಜೂರಾತಿ.–

**ಓದಲಾಗಿದೆ :** 1) ಪತ್ರ ಸಂಖ್ಯೆ: ಕುಸ/ಪಸಂಮೀ/ಪಾಲಿಟೆಕ್‌ನಿಕ್/2011/1255, ದಿನಾಂಕ 15–06–2011.

2) ಸರ್ಕಾರಿ ಆದೇಶ ಸಂಖ್ಯೆ: **ಪಸಂಮೀ** 116 ಪಸಸೇ 2011, ದಿನಾಂಕ 14–09–2011

**ಪ್ರಸ್ತಾವನೆ :**

ಮಾನ್ಯ ಮುಖ್ಯಮಂತ್ರಿಯವರು ದಿನಾಂಕ 24–02–2011 ರಂದು ವಿಧಾನಮಂಡಲದಲ್ಲಿ ಮಂಡಿಸಿದ ಕೃಷಿ ಆಯವ್ಯಯದಲ್ಲಿ ನೂತನ ಕಾರ್ಯತಂತ್ರಗಳಡಿ ಪಶುಸಂಗೋಪನಾ ಪಾಲಿಟೆಕ್ನಿಕ್ ಕಾಲೇಜುಗಳನ್ನು ಸ್ಥಾಪಿಸುವುದಾಗಿ ಘೋಷಿಸಿರುತ್ತಾರೆ.

ಮಾನ್ಯ ಮುಖ್ಯಮಂತ್ರಿಯವರ ಘೋಷಣೆಯನ್ನು ಅನುಸರಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಜಾನುವಾರು ಸಂಶೋಧನಾ ಮತ್ತು ಮಾಹಿತಿ ಕೇಂದ್ರ, ಕೋನೆಹಳ್ಳಿ, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ ಇಲ್ಲಿ 2011–12ನೇ ಶೈಕ್ಷಣಿಕ ವರ್ಷದಿಂದ ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್ ವ್ಯಾಪ್ತಿಯಲ್ಲಿರುವ ಜಾನುವಾರು ಸಂಶೋಧನಾ ಮತ್ತು ಮಾಹಿತಿ ಕೇಂದ್ರ, ಕೋನೆಹಳ್ಳಿ, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ ಇಲ್ಲಿ ಎಸ್.ಎಸ್.ಎಲ್.ಸಿ. ತೇರ್ಗಡೆಯಾದ ಗ್ರಾಮೀಣ ಅಭ್ಯರ್ಥಿಗಳಿಗೆ ಸೀಮಿತವಾಗಿ 2 ವರ್ಷಗಳ ಡಿಪ್ಲೋಮಾ ಪಶುಸಂಗೋಪನಾ ಪಾಲಿಟೆಕ್ನಿಕ್ ಸ್ಥಾಪಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ಕುಲಸಚಿವರು, ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್ ಖಿಲಾರ ತಳಿ ಸಂವರ್ಧನಾ ಕೇಂದ್ರ ಶಿಗ್ಗಾಂವ್ ತಾಲ್ಲೂಕು, ಹಾವೇರಿ ಜಿಲ್ಲೆ ಇಲ್ಲಿ ಪಶುಸಂಗೋಪನಾ ಪಾಲಿಟೆಕ್ನಿಕ್ ಸ್ಥಾಪಿಸುವ ಸಂಬಂಧ ಯೋಜನಾ ವರದಿ ಸಲ್ಲಿಸಿದ್ದು, ಅದರಲ್ಲಿ ಎಸ್.ಎಸ್.ಎಲ್.ಸಿ. ತೇರ್ಗಡೆಯಾದ ಗ್ರಾಮೀಣ ಅಭ್ಯರ್ಥಿಗಳಿಗೆ ಸೀಮಿತವಾಗಿ ತಲಾ 100 ವಿದ್ಯಾರ್ಥಿಗಳ ಪ್ರವೇಶದೊಂದಿಗೆ 2 ವರ್ಷಗಳ ಪಶುಸಂಗೋಪನಾ ಡಿಪ್ಲೋಮಾ ಕೋರ್ಸ್‌ನ್ನು ಪ್ರಾರಂಭಿಸಲು ಪ್ರಸ್ತಾಪಿಸಿರುತ್ತಾರೆ. ಪಾಲಿಟೆಕ್ನಿಕ್ ಸ್ಥಾಪನೆಗೆ 2011–12ನೇ ಸಾಲಿನಲ್ಲಿ ರೂ. 110.00 ಲಕ್ಷಗಳ ಆವರ್ತಕ ವೆಚ್ಚ ಮತ್ತು ರೂ. 590.00 ಲಕ್ಷಗಳ ಅನಾವರ್ತಕ ವೆಚ್ಚ ಹೀಗೆ ರೂ. 700.00 ಲಕ್ಷಗಳ ವೆಚ್ಚ ತಗಲುವುದಲ್ಲದೆ, 9 ಬೋಧಕರ ಮತ್ತು 23 ಬೋಧಕೇತರ ಹುದ್ದೆ ಹೀಗೆ ಒಟ್ಟು 32 ಹುದ್ದೆಗಳ ಅಗತ್ಯ ಇರುತ್ತದೆ ಎಂದು ತಿಳಿಸಿರುತ್ತಾರೆ.

ಕುಲಸಚಿವರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಗ್ರಾಮೀಣ ಪ್ರದೇಶದಲ್ಲಿ ಪಶುಸಂಗೋಪನಾ ಕಾರ್ಯಚಟುವಟಿಕೆಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ತರಬೇತಿ ಪಡೆದಿರುವ ಸಿಬ್ಬಂದಿಗಳ ಅವಶ್ಯಕತೆ ಇದ್ದು, ಹೈನುಗಾರಿಕೆ ಮತ್ತು ಪಶುಸಂಗೋಪನೆ ಕ್ಷೇತ್ರವನ್ನು ಅಭಿವೃದ್ಧಿಗೊಳಿಸುವ ಸಲುವಾಗಿ ಕೃಷಿಕರೊಡನೆ ಕಾರ್ಯನಿರ್ವಹಿಸಲು ತಾಂತ್ರಿಕ ವರ್ಗದ ಸಿಬ್ಬಂದಿಗಳನ್ನು ತರಬೇತಿಗೊಳಿಸಬೇಕಾದ ಅವಶ್ಯಕತೆ ಇರುತ್ತದೆ. ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ಪಶುವೈದ್ಯಕೀಯ ಸೇವೆಗಳನ್ನು ಗ್ರಾಮೀಣ ಪ್ರದೇಶಗಳಿಗೂ ವಿಸ್ತರಿಸಿ ಉತ್ತರ ಕರ್ನಾಟಕ ಭಾಗದ ಪಶುಸಂಗೋಪನೆ ಮತ್ತು ಹೈನುಗಾರಿಕೆ ಉತ್ತೇಜಿಸುವ ದೃಷ್ಟಿಯಿಂದ 2011–12ನೇ ಸಾಲಿನಲ್ಲಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಅಧೀನದಲ್ಲಿರುವ ಖಿಲಾರ್ ತಳಿ ಸಂವರ್ಧನಾ ಕೇಂದ್ರ, ಬಂಕಾಪೂರ, ಶಿಗ್ಗಾಂವ್ ತಾಲ್ಲೂಕು, ಹಾವೇರಿ ಜಿಲ್ಲೆ ಇಲ್ಲಿ ಪಶುಸಂಗೋಪನಾ ಪಾಲಿಟೆಕ್ನಿಕ್‌ನ್ನು ಸ್ಥಾಪಿಸಲು ತೀರ್ಮಾನಿಸಿದೆ. ಅಂತೆಯೇ, ಜಾನುವಾರು ಸಂಶೋಧನಾ ಮತ್ತು ಮಾಹಿತಿ ಕೇಂದ್ರ, ಕೋನೆಹಳ್ಳಿಯ ಮಾದರಿಯಂತೆ ಸದರಿ ಪಾಲಿಟೆಕ್ನಿಕ್ ಕಾಲೇಜಿನಲ್ಲಿಯೂ ಸಹ ಎಸ್.ಎಸ್.ಎಲ್.ಸಿ. ತೇರ್ಗಡೆಯಾದ ಗ್ರಾಮೀಣ ಅಭ್ಯರ್ಥಿಗಳಿಗೆ ಸೀಮಿತವಾಗಿ 2 ವರ್ಷಗಳ ಪಶುಸಂಗೋಪನಾ ಡಿಪ್ಲೋಮಾ ಕೋರ್ಸ್‌ನ್ನು ಪ್ರಾರಂಭಿಸಿ, ಆರಂಭದಲ್ಲಿ 50 ವಿದ್ಯಾರ್ಥಿಗಳನ್ನು ಪ್ರವೇಶಕ್ಕೆ ತೆಗೆದುಕೊಂಡು ತರಬೇತಿ ನೀಡಲು ನಿರ್ಧರಿಸಿದೆ. ಆದ್ದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 267 ಪಸಸೇ 2011, ಬೆಂಗಳೂರು, ದಿನಾಂಕ : 15–12–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರ 2011–12ನೇ ಶೈಕ್ಷಣಿಕ ವರ್ಷದಿಂದ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಅಧೀನದಲ್ಲಿರುವ ಖಿಲಾರ್ ತಳಿ ಸಂವರ್ಧನಾ ಕೇಂದ್ರ, ಬಂಕಾಪೂರ, ಶಿಗ್ಗಾಂವ್ ತಾಲ್ಲೂಕು, ಹಾವೇರಿ ಜಿಲ್ಲೆ ಇಲ್ಲಿ ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್ ಅಡಿ ಎಸ್.ಎಸ್.ಎಲ್.ಸಿ. ತೇರ್ಗಡೆಯಾದ ಗ್ರಾಮೀಣ ಅಭ್ಯರ್ಥಿಗಳಿಗೆ ಸೀಮಿತವಾಗಿ ಪಶುವೈದ್ಯಕೀಯ ವಿಶ್ವವಿದ್ಯಾಲಯ ಯೋಜನಾ ವರದಿಯಲ್ಲಿ ನಮೂದಿಸಿರುವ ಪಠ್ಯಕ್ರಮದಂತೆ 2 (ಎರಡು) ವರ್ಷಗಳ ಡಿಪ್ಲೋಮಾ ಪಶುಸಂಗೋಪನಾ ಪಾಲಿಟೆಕ್ನಿಕ್ ಸ್ಥಾಪಿಸಲು ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

ಈ ಪಶುಸಂಗೋಪನಾ ಪಾಲಿಟೆಕ್ನಿಕ್‌ಗೆ ಪ್ರಾರಂಭದಲ್ಲಿ 50 ವಿದ್ಯಾರ್ಥಿಗಳ ಪ್ರವೇಶ ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

ಬಂಕಾಪೂರದಲ್ಲಿ ಪಶುಸಂಗೋಪನಾ ಪಾಲಿಟೆಕ್ನಿಕ್ ಸ್ಥಾಪಿಸಲು ಅಗತ್ಯವಾದ ಈ ಕೆಳಕಂಡ ಆವರ್ತಕ ಮತ್ತು ಅನಾವರ್ತಕ ವೆಚ್ಚಗಳನ್ನು ಭರಿಸಲು ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್‌ಗೆ 2011–12ನೇ ಸಾಲಿನ ಪೂರಕ ಅಂದಾಜು– II ರಲ್ಲಿ ಲೆಕ್ಕಶೀರ್ಷಿಕೆ 2403–00–800–0–22–101 (ಯೋಜನೇತರ) ಅಡಿ ರೂ. 200–00 (ಎರಡು ನೂರು ಲಕ್ಷ ರೂಪಾಯಿಗಳು ಮಾತ್ರ) ಲಕ್ಷ ಅನುದಾನವನ್ನು ಒದಗಿಸಲಾಗಿದೆ.

ಈ ಪಶುಸಂಗೋಪನಾ ಪಾಲಿಟೆಕ್ನಿಕ್‌ಗೆ ಯು.ಜಿ.ಸಿ./ಐ.ಸಿ.ಎ.ಆರ್. ವೇತನ ಶ್ರೇಣಿಯ ಈ ಕೆಳಕಂಡ ಬೋಧಕ ವೃಂದದ 5 ಹುದ್ದೆಗಳನ್ನು ಮತ್ತು ವಿಶ್ವವಿದ್ಯಾಲಯದ ವೇತನ ಶ್ರೇಣಿಯ ಈ ಕೆಳಕಂಡ ಬೋಧಕೇತರ ವೃಂದದ 11 ಹುದ್ದೆಗಳನ್ನು ಸೃಜಿಸಲು ಅನುಮತಿ ನೀಡಲಾಗಿದೆ. ಸದರಿ ಹುದ್ದೆಗಳನ್ನು ನಿಯಮಾನುಸಾರ ಭರ್ತಿ ಮಾಡಿಕೊಳ್ಳತಕ್ಕದ್ದು.

| I ಬೋಧಕ ವೃಂದ (Teaching Cadre) | | |
|---|---|---|
| 1 | ಪ್ರಾಂಶುಪಾಲರು (ಸಹ ಪ್ರಾಧ್ಯಾಪಕರ ವೃಂದದಲ್ಲಿ)<br>(Principal in the cadre of Associate Professor) | 01 (ಒಂದು) |
| 2 | ಸಹಾಯಕ ಪ್ರಾಧ್ಯಾಪಕರು (Assistant Professors) | 04 (ನಾಲ್ಕು) |
| | ಒಟ್ಟು ಹುದ್ದೆಗಳು | 05 (ಐದು) |

| | II ಬೋಧಕೇತರ ವೃಂದ (Non-Teaching Cadre) | |
|---|---|---|
| 1 | ಸಹಾಯಕ (Assistant) | 01 (ಒಂದು) |
| 2 | ಪ್ರಯೋಗಾಲಯ ಸಹಾಯಕ (Lab Assistant) | 02 (ಎರಡು) |
| 3 | ಕ್ಷೇತ್ರ ಸಹಾಯಕ (Field Assistant) | 02 (ಎರಡು) |
| 4 | ವಾಹನ ಚಾಲಕ (Driver) | 01 (ಒಂದು) |
| 5 | ಅಡುಗೆ ಪರಿಚಾರಕ (Cook-cum-caretaker) | 02 (ಎರಡು) |
| 6 | ಪ್ರಾಣಿ ಪರಿಚಾರಕ (Animal Attendant) | 03 (ಮೂರು) |
| | ಒಟ್ಟು ಹುದ್ದೆಗಳು | 11 (ಹನ್ನೊಂದು) |

ಎಲ್ಲಾ ಬೋಧಕೇತರ ಹುದ್ದೆಗಳನ್ನು ಹೊರಗುತ್ತಿಗೆ (Out-source) ಮೂಲಕವೇ ಭರ್ತಿ ಮಾಡಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 511 ವೆಚ್ಚ-4/2011, ದಿನಾಂಕ 30-11-2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ಪಿ. ನಾಗರಾಜ**

ಪೀಠಾಧಿಕಾರಿ-2

ಪಿ.ಆರ್. 144 ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

(ಪಶುಸಂಗೋಪನೆ-ಎ)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ ಕೆ. ತೀರ್ಥಪ್ಪ, ಹಿಂದಿನ ಉಪ ನಿರ್ದೇಶಕರು (ಖಾಗ್ರಾ) ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್ ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಜಿಲ್ಲಾ ಸರಬರಾಜು ಮತ್ತು ಮಾರಾಟ ಸಹಕಾರ ಸಂಘ, ಬೆಂಗಳೂರು (ಗ್ರಾಮಾಂತರ) ಜಿಲ್ಲೆ ಇವರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಕಳಪೆ ಗುಣಮಟ್ಟದ ಪೀಠೋಪಕರಣಗಳನ್ನು ಸರಬರಾಜು ಮಾಡಿರುವ ಆರೋಪಕ್ಕೆ ಗುರಿಯಾಗಿರುವ ಬಗ್ಗೆ ಹಲವು ಅಂಶಗಳ ಕುರಿತು ಇಲಾಖಾ ವಿಚಾರಣೆಯನ್ನು ಮುಂದುವರೆಸಿ (Further Enquiry) ನಡೆಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ವಾಕೈ 69 ಕೈಸೇವಿ 2002, ಬೆಂಗಳೂರು, ದಿನಾಂಕ 14-10-2005
2) ವಿಚಾರಣಾಧಿಕಾರಿಯವರ ಇಲಾಖಾ ವಿಚಾರಣಾ ವರದಿ ದಿನಾಂಕ 25-02-2009
3) ಕಾರಣ ಕೇಳುವ ನೋಟೀಸ್ ದಿನಾಂಕ 19-03-2009
4) ಶ್ರೀ ಕೆ. ತೀರ್ಥಪ್ಪ, ಉಪ ನಿರ್ದೇಶಕರು ಇವರ ರಕ್ಷಣಾ ಹೇಳಿಕೆ

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಶ್ರೀ ಕೆ. ತೀರ್ಥಪ್ಪ, ಉಪ ನಿರ್ದೇಶಕರು, ಈ ಹಿಂದೆ ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್ ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಜಿಲ್ಲಾ ಸರಬರಾಜು ಮತ್ತು ಮಾರಾಟ ಸಹಕಾರ ಸಂಘ, ಬೆಂಗಳೂರು (ಗ್ರಾಮಾಂತರ) ಜಿಲ್ಲೆ ಈ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಐ.ಪಿ.ಪಿ. ಯೋಜನೆಯಡಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಕಳಪೆ ಗುಣಮಟ್ಟದ ಪೀಠೋಪಕರಣಗಳನ್ನು ಸರಬರಾಜು ಮಾಡಿರುವ ಆರೋಪಕ್ಕೆ ಗುರಿಯಾಗಿದ್ದು, ಸದರಿ ಅಧಿಕಾರಿಯವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11 ರಡಿ ವಿಚಾರಣೆ ನಡೆಸಲು ವಿಚಾರಣಾಧಿಕಾರಿಯನ್ನಾಗಿ ಶ್ರೀ ಪದ್ಮನಾಭ ಕೆದಿಲಾಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ರವರನ್ನು ನೇಮಿಸಲಾಗಿತ್ತು.

ಮೇಲೆ ಓದಲಾದ (2)ರ ವಿಚಾರಣಾಧಿಕಾರಿಯವರ ವಿಚಾರಣಾ ವರದಿಯಲ್ಲಿ ಶ್ರೀ ಕೆ. ತೀರ್ಥಪ್ಪ, ಉಪ ನಿರ್ದೇಶಕರು, ಜಿಲ್ಲಾ ಸರಬರಾಜು ಮತ್ತು ಮಾರಾಟ ಸಹಕಾರ ಸಂಘ, ಬೆಂಗಳೂರು ಇಲ್ಲಿ ವ್ಯವಸ್ಥಾಪಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ 17 ಜಿಲ್ಲೆಗಳಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಅವಶ್ಯವಿದ್ದ 2000 ಟೀಕ್‌ವುಡ್ (ಸಾಗುವಾನಿ) ಮರದ ಬೆಂಚುಗಳನ್ನು ಸರಬರಾಜು ಮಾಡಿದ ಸಂಬಂಧ ನಿಯಮಗಳನ್ನು ಪಾಲಿಸದೆ ಅಧಿಕಾರದ ದುರುಪಯೋಗ, ಕರ್ತವ್ಯಲೋಪ, ನಿರ್ಲಕ್ಷ್ಯತೆ ಮತ್ತು ನಿಯಮಗಳನ್ನು ಉಲ್ಲಂಘಿಸಿರುವ ಬಗ್ಗೆ ಸರ್ಕಾರಕ್ಕೆ ಉಂಟು ಮಾಡಿರುವ ನಷ್ಟದ ಬಗ್ಗೆ ವಿಚಾರಣಾಧಿಕಾರಿಗಳು ದಿನಾಂಕ 25-02-2009 ರಂದು ಸರ್ಕಾರಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸಿ ಶೇಕಡ 70 ರಿಂದ 90 ರಷ್ಟು ಸರಬರಾಜಾದ ಬೆಂಚುಗಳಲ್ಲಿ ಶೇಕಡ 50 ರಷ್ಟು ಮೌಲ್ಯಕ್ಕೆ ಆಪಾದಿತ ಅಧಿಕಾರಿಯ ನಿರ್ಲಕ್ಷ್ಯ, ಬೇಜವಾಬ್ದಾರಿಯಿಂದಾಗಿ ನಷ್ಟ ಉಂಟಾಗಿದ್ದು ಅದಕ್ಕೆ ಅವರೇ ಕಾರಣರಾಗಿದ್ದಾರೆಂದು ವಿಚಾರಣಾ ವರದಿಯಲ್ಲಿ ತಿಳಿಸಿರುತ್ತಾರೆ.

ಮೇಲೆ ಓದಲಾದ (3)ರ ದಿನಾಂಕ 19-03-2009ರ ಕಾರಣ ಕೇಳುವ ನೋಟೀಸಿನಲ್ಲಿ ನೈಸರ್ಗಿಕ ನ್ಯಾಯದ ಪಾಲನಾ ಕ್ರಮವಾಗಿ ವಿಚಾರಣಾ ವರದಿಯ ಪ್ರತಿಯನ್ನು ಅಧಿಕಾರಿಗೆ ಒದಗಿಸಿ ಪ್ರತಿ ಹೇಳಿಕೆ ಸಲ್ಲಿಸಲು ಅವಕಾಶ ಕಲ್ಪಿಸಲಾಗಿದೆ.

ಮೇಲೆ ಓದಲಾದ (4)ರ ರಕ್ಷಣಾ ಹೇಳಿಕೆಯಲ್ಲಿ ಶ್ರೀ ಕೆ. ತೀರ್ಥಪ್ಪ, ಉಪ ನಿರ್ದೇಶಕರು, ವಿವರಣೆಯನ್ನು ಸಲ್ಲಿಸಿ, ವಿಚಾರಣಾಧಿಕಾರಿಗಳು ನೀಡಿರುವ ವರದಿಯನ್ನು ಪರಿಗಣಿಸಬಾರದೆಂದು ಹಾಗೂ ತಿರಸ್ಕರಿಸುವಂತೆ ಸರ್ಕಾರಕ್ಕೆ ಕೋರಿರುತ್ತಾರೆ.

ಸದರಿ ಅಧಿಕಾರಿಯವರು ಸಲ್ಲಿಸಿದ ಹೇಳಿಕೆಯನ್ನು ಸರ್ಕಾರದಲ್ಲಿ ಪರಿಶೀಲಿಸಿದ್ದು, ಗುರುತರವಾದ ಆರೋಪಗಳು ಇರುವುದರಿಂದ ಪ್ರಸ್ತುತ ವಿಷಯದಲ್ಲಿ ಸರಬರಾಜಾದ ಒಟ್ಟು 2000 ಬೆಂಚುಗಳ ಪೈಕಿ, ನಷ್ಟದ ಶೇಕಡ 50 ರಷ್ಟು ಭಾಗಕ್ಕೆ ಶ್ರೀ ಕೆ. ತೀರ್ಥಪ್ಪನವರೇ ಹೊಣೆಗಾರರಾಗುತ್ತಾರೆಂದು ವಿಚಾರಣಾ ವರದಿಯಲ್ಲಿ ತಿಳಿಸಲಾಗಿದೆ. ಅದರಂತೆ ಸರಬರಾಜು ಮಾಡಿದ ವಸ್ತುಗಳ ಮೌಲ್ಯವು ಒಟ್ಟು ರೂ. 28,86,000-00 ಗಳಾಗಿದ್ದು, ಅದರಲ್ಲಿ ಸದರಿ ಅಧಿಕಾರಿಯು ರೂ. 14,43,000-00 ಲಕ್ಷ ಗಳಿಗೆ ಹೊಣೆಗಾರರಾಗುತ್ತಾರೆಂದು ವಿಚಾರಣಾಧಿಕಾರಿಗಳು ತಮ್ಮ ನಿರ್ಧಾರಣೆಯನ್ನು

ದಾಖಲಿಸಿರುವುದನ್ನು ಸರ್ಕಾರದಲ್ಲಿ ಪರಿಗಣಿಸಿ ಹಾಗೂ ಸದರಿ ಅಧಿಕಾರಿಯನ್ನು ಕೆ.ಸಿ.ಎಸ್. (ಸಿಸಿಎ) ನಿಯಮ 8 ರಲ್ಲಿ ವಿಷದಪಡಿಸಿರುವಂತೆ ಕಠಿಣ ದಂಡನೆಗೆ ಒಳಪಡಿಸಲು ಈ ಪ್ರಕರಣದಲ್ಲಿ ಶಿಸ್ತು ಪ್ರಾಧಿಕಾರವು ಸರ್ಕಾರವಾಗಿದ್ದು, ಶಿಕ್ಷೆಯ ಪ್ರಮಾಣವನ್ನು ನಿರ್ಧರಿಸಲು, ಅಂತೆಯೇ ಶಿಸ್ತು ಪ್ರಾಧಿಕಾರವು ಕೆ.ಸಿ.ಎಸ್. ನಿಯಮದ ನಿಯಮ 8 (vii)ರ ಅನುಸಾರ ಸದರಿ ನಿಯಮದ ಪರಂತುಕವನ್ನು ಓದಿಕೊಂಡಂತೆ ಸೇವೆಯಿಂದ ತೆಗೆದುಹಾಕುವ (Removed from Service which shall not be be a disqualification further Employment) ದಂಡನೆಯನ್ನು ವಿಧಿಸಲು ತೀರ್ಮಾನಿಸಲಾಗಿರುತ್ತದೆ.

ಆದಾಗ್ಯೂ ಶ್ರೀ ಕೆ. ತೀರ್ಥಪ್ಪ, ಉಪ ನಿರ್ದೇಶಕರು, "ಎ"ವೃಂದದ ಅಧಿಕಾರಿಯಾಗಿರುವುದರಿಂದ ಶಿಸ್ತು ಪ್ರಾಧಿಕಾರ ಹಾಗೂ ಸಕ್ಷಮ ಪ್ರಾಧಿಕಾರ ಸರ್ಕಾರವಾಗಿರುವುದರಿಂದ ಈ ಪ್ರಕರಣಕ್ಕೆ ಸಂಬಂಧಿಸಿದಂತೆ, ಈ ಕೆಳಕಂಡ ಅಂಶಗಳ ಬಗ್ಗೆ ವಿಚಾರಣೆಯನ್ನು ಮುಂದುವರೆಸಬೇಕೆಂದು ಸರ್ಕಾರದಲ್ಲಿ ಪರಿಗಣಿಸಿದ್ದು ಮತ್ತು ಅದೇ ವಿಚಾರಣಾಧಿಕಾರಿಗಳಿಗೆ ಇಲಾಖಾ ವಿಚಾರಣೆಯನ್ನು ಮುಂದುವರಿಸಲು ವಹಿಸಬೇಕೆಂದು ನಿರ್ಣಯಿಸಲಾಗಿರುತ್ತದೆ.

1. ವಿಚಾರಣಾಧಿಕಾರಿಗಳು ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಆರೋಗ್ಯ ಇಲಾಖೆ ಅಧಿಕಾರಿಗಳು, ಅರಣ್ಯ ಇಲಾಖೆ ಅಧಿಕಾರಿಗಳು, ಡಿ.ಎಸ್.ಎಂ.ಎಸ್. ಅಧಿಕಾರಿಗಳು, ಡಿ.ಜಿ.ಎಸ್. ಮತ್ತು ಡಿ ಅಧಿಕಾರಿಗಳು ಹಾಗೂ ಪೂರೈಕೆದಾರರುಗಳ ಜಂಟಿ ತಪಾಸಣೆಯನ್ನು ಮಾಡಿರುವುದಿಲ್ಲ ಹಾಗೂ ವಿಚಾರಣೆಯನ್ನು ಸದರಿ ಅಧಿಕಾರಿಗಳ ಸಮಕ್ಷಮದಲ್ಲಿ ಸಹ ಮಾಡಿರುವುದಿಲ್ಲ.
2. ವಿಚಾರಣಾಧಿಕಾರಿಯು ತಮ್ಮ ವಿಚಾರಣಾ ವರದಿಯಲ್ಲಿ ತಿಳಿಸಿರುವಂತೆ ಮರಗಳ ತಳಿಗಳನ್ನು ಗುರುತಿಸಲು ಸದರಿ ವಿಷಯಕ್ಕೆ ಸಂಬಂಧಿಸಿದ ತರಬೇತಿಯನ್ನು ಪಡೆದ ಐ.ಎಫ್.ಎಸ್. ಆದ ಅರಣ್ಯ ಅಧಿಕಾರಿಗಳಿಂದ ತಪಾಸಣೆ ಮಾಡಿಸುವುದು ಸೂಕ್ತ ಎಂದು ತಿಳಿಸಿದ್ದು ವಿಚಾರಣಾಧಿಕಾರಿಗಳ ಅಭಿಪ್ರಾಯದಂತೆ ಮರಗಳ ತಳಿಗಳನ್ನು ಗುರುತಿಸುವ ಸಂಬಂಧ ತರಬೇತಿ ಪಡೆದ ಐ.ಎಫ್.ಎಸ್. ಅಧಿಕಾರಿಗಳಿಂದ ತಪಾಸಣೆ ಮಾಡಿಸುವುದು.
3. ವಿಚಾರಣಾ ಸಮಯದಲ್ಲಿ ಆಪಾದಿತ ಅಧಿಕಾರಿಯ ಅನುಪಸ್ಥಿತಿಯಲ್ಲಿ ಕೆಲವು ಸಾಕ್ಷಿಗಳನ್ನು ಮಾತ್ರ ವಿಚಾರಣೆಗೆ ಒಳಪಡಿಸಿರುವುದು ಕಂಡು ಬಂದಿರುತ್ತದೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ವಾಕೈ/144/ಕೈಸೇವಿ/2008, ಬೆಂಗಳೂರು, ದಿನಾಂಕ 14–12–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ವಾಕೈ/69/ಕೈಸೇವಿ/2005, ದಿನಾಂಕ 14–10–2005 ಅನ್ನು ಮುಂದುವರಿಸುತ್ತಾ ಶ್ರೀ ಕೆ. ತೀರ್ಥಪ್ಪ, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರು ಈ ಹಿಂದೆ ಉಪ ನಿರ್ದೇಶಕರು (ಖಾಗ್ರಾ), ಬೆಂಗಳೂರು ನಗರ ಜಿಲ್ಲಾ ಪಂಚಾಯತ್, ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್ ಮತ್ತು ವ್ಯವಸ್ಥಾಪಕ ನಿರ್ದೇಶಕರು, ಜಿಲ್ಲಾ ಸರಬರಾಜು ಮತ್ತು ಮಾರಾಟ ಸಹಕಾರ ಸಂಘ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಈ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಿರುವ ಅವಧಿಯಲ್ಲಿ ಐ.ಪಿ.ಪಿ. ಯೋಜನೆ ಯಡಿಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಕಳಪೆ ಗುಣ ಮಟ್ಟದ ಪೀಠೋಪಕರಣ ಇತ್ಯಾದಿ ಸಾಮಗ್ರಿಗಳನ್ನು ಸರಬರಾಜು ಮಾಡಿರುವ ಆರೋಪಕ್ಕೆ ಗುರಿಯಾಗಿದ್ದು, ಸದರಿ ಅಧಿಕಾರಿಯವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮ 1957ರ ನಿಯಮ 11 (5)ರ ಅನ್ವಯ ಹಾಗೂ ಅದೇ ನಿಯಮದ ಉಪ ನಿಯಮ (2)ರ ಅನ್ವಯ ಪ್ರದತ್ತವಾದ ಅಧಿಕಾರದ ಅನ್ವಯ ಈ ಕೆಳಕಂಡ ಅಂಶಗಳಿಗೆ ಇಲಾಖಾ ವಿಚಾರಣೆಯನ್ನು ಮುಂದುವರೆಸಿ (Further Enquiry) ನಡೆಸಲು ಸರ್ಕಾರವು ಆದೇಶಿಸಿದೆ.

1. ವಿಚಾರಣಾಧಿಕಾರಿಗಳು ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಆರೋಗ್ಯ ಇಲಾಖೆ ಅಧಿಕಾರಿಗಳು, ಅರಣ್ಯ ಇಲಾಖೆ ಅಧಿಕಾರಿಗಳು, ಡಿ.ಎಸ್.ಎಂ.ಎಸ್. ಅಧಿಕಾರಿಗಳು, ಡಿ.ಜಿ.ಎಸ್. ಮತ್ತು ಡಿ ಅಧಿಕಾರಿಗಳು ಹಾಗೂ ಪೂರೈಕೆದಾರರುಗಳ ಜಂಟಿ ತಪಾಸಣೆಯನ್ನು ಮಾಡಿರುವುದಿಲ್ಲ ಹಾಗೂ ವಿಚಾರಣೆಯನ್ನು ಸದರಿ ಅಧಿಕಾರಿಗಳ ಸಮಕ್ಷಮದಲ್ಲಿ ನಡೆಸುವುದು.
2. ವಿಚಾರಣಾಧಿಕಾರಿಯು ತಮ್ಮ ವಿಚಾರಣಾ ವರದಿಯಲ್ಲಿ ತಿಳಿಸಿರುವಂತೆ ಮರಗಳ ತಳಿಗಳನ್ನು ಗುರುತಿಸಲು ಸದರಿ ವಿಷಯಕ್ಕೆ ಸಂಬಂಧಿಸಿದ ತರಬೇತಿಯನ್ನು ಪಡೆದ ಐ.ಎಫ್.ಎಸ್. ಆದ ಅರಣ್ಯ ಅಧಿಕಾರಿಗಳಿಂದ ತಪಾಸಣೆ ಮಾಡಿಸುವುದು ಸೂಕ್ತ ಎಂದು ತಿಳಿಸಿದ್ದು ವಿಚಾರಣಾಧಿಕಾರಿಗಳ ಅಭಿಪ್ರಾಯದಂತೆ ಮರಗಳ ತಳಿಗಳನ್ನು ಗುರುತಿಸುವ ಸಂಬಂಧ ತರಬೇತಿ ಪಡೆದ ಐ.ಎಫ್.ಎಸ್. ಅಧಿಕಾರಿಗಳಿಂದ ತಪಾಸಣೆ ಮಾಡಿಸುವುದು.
3. ವಿಚಾರಣಾ ಸಮಯದಲ್ಲಿ ಆಪಾದಿತ ಅಧಿಕಾರಿಯ ಅನುಪಸ್ಥಿತಿಯಲ್ಲಿ ಕೆಲವು ಸಾಕ್ಷಿಗಳನ್ನು ಮಾತ್ರ ವಿಚಾರಣೆಗೆ ಒಳಪಡಿಸಿರುವುದು ಕಂಡು ಬಂದ ಕಾರಣ ಅಗತ್ಯವಾದಂತಹ ಎಲ್ಲಾ ಸಾಕ್ಷಿದಾರರನ್ನು ಸಹ ವಿಚಾರಣೆಗೆ ಒಳಪಡಿಸಿ ಕ್ರಮ ಕೈಗೊಳ್ಳಲು;

ಮೇಲ್ಕಂಡ ಅಂಶಗಳಿಗೆ ವಿಚಾರಣೆಯನ್ನು ಮುಂದುವರೆಸಿ (Further Enquiry) ನಡೆಸಲು ಶೀ ಪದ್ಮನಾಭ ಕೆದಿಲಾಯ, ಮಾನ್ಯ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ನಂ. 45, 4ನೇ ಕ್ರಾಸ್, ಜ್ಯುಡಿಷಿಯಲ್ ಆಫೀಸರ್ಸ್ ಲೇ ಔಟ್ ಸಂಜಯನಗರ, ಬೆಂಗಳೂರು–94 ಇವರನ್ನು ವಿಚಾರಣಾಧಿಕಾರಿಯನ್ನಾಗಿ ಉಪ ನಿರ್ದೇಶಕರು (ಖಾಗ್ರಾ), ಬೆಂಗಳೂರು ನಗರ ಜಿಲ್ಲಾ ಪಂಚಾಯತ್ ಇವರನ್ನು ಮಂಡನಾಧಿಕಾರಿಯನ್ನಾಗಿ ಮುಂದುವರಿಸಿ ನೇಮಿಸಿದೆ.

ವಿಚಾರಣಾಧಿಕಾರಿಗಳು, ವಿಚಾರಣೆಯನ್ನು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ನಿರ್ದೇಶಕರ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿರುವ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಚೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಒದಗಿಸಲು ಹಾಗೂ ಸಂಬಂಧಿಸಿದ ಕಚೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಮತ್ತು ಲೇಖನ ಸಾಮಗ್ರಿಗಳನ್ನು ಒದಗಿಸಲು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರಿಗೆ ಸೂಚಿಸಲಾಗಿದೆ.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ಮೂರು ತಿಂಗಳೊಳಗಾಗಿ ಪೂರ್ಣಗೊಳಿಸಿ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಲ್. ಎಸ್. ವಾಸನ್**

ಸರ್ಕಾರದ ಅಧೀನ ಕಾರ್ಯದರ್ಶಿ

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

ಪಿ.ಆರ್. 145

## COMMERCE AND INDUSTRIES SECRETARIAT

**Sub :** Constituting a Committee for conduct of the demarcation and identification of the boundaries in respect of Mining Lease No. 2622 - regarding.

**Read :** 1. Orders of Hon'ble Supreme Court in Civil Appeal No. 8819/2011 dated 18.10.2011.
2. Letter No. DMG/LS/CA No. 8819:2011:2011-12:4652 dated 26.10.2011.

**Preamble:**

Hon'ble Supreme Court in Civil Appeal No. 8819/2011 filed by Shri Ashok Kumar Lingala has issued directions to State Government vide its order dated 18.10.2011 read at (1) above to constitute a Committee of officers to conduct survey for demarcation and identification of the boundaries of the area leased to the applicant Shri Ashok Kumar Lingala in terms of Mining lease No. 2622 and the Committee so constituted shall include the Deputy Commissioner, the Chief Conservator of Forests or his nominee not below the rank of Assistant Conservator of Forests, the Director of Surveys and a senior officer of the Mines Department within 6 months from the date of receipt of the order of the Hon'ble Supreme Court.

The Director of Mines and Geology vide his letter dated 26.10.2011 read at (2) above has requested the Government to take suitable action as per the directions of Hon'ble Supreme Court.

Considering the orders of Hon'ble Supreme Court and the proposal of Director of Mines and Geology, it is felt necessary to issue Government order constituting the Committee in this regard. Hence the following order.

**Government Order No. CI.36:MPP.2011, Bangalore Dated: 16-12-2011.**

A Committee of the following officers are hereby constituted to conduct survey for the demarcation and identification of the boundaries of the area leased to the applicant Shri Ashok Kumar Lingala as regards the mining lease No. 2622:-

1. Director of Department of Mines and Geology, Bangalore.
2. Joint Director of Department of Survey and Settlement, Gulbarga.
3. Deputy Commissioner, Bellary
4. Assistant Conservator of Forests, Bellary.

The said Committee shall keep in view the directions of the Hon'ble Supreme Court of India conduct detailed study of the Mining lease No. 2622 and furnish the report to Government within a period of 3 months, positively.

By Order and in the name of the Governor of Karnataka,
**M.V. Shivasubramani**
Under Secretary to Government (Mines)
Commerce & Industries Department

PR. 146

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ನಿಪ್ಪಾಣಿಯ ಶ್ರೀ ಹಾಲಸಿದ್ಧನಾಥ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತದಿಂದ ಬಾಕಿ ಇರುವ ಸಾಲ ₹1183.09 ಲಕ್ಷಗಳನ್ನು ಷೇರು ಬಂಡವಾಳವನ್ನಾಗಿ ಪರಿವರ್ತಿಸುವ ಬಗ್ಗೆ.

**ಓದಲಾಗಿದೆ:** ಕಬ್ಬು ಅಭಿವೃದ್ಧಿ ಆಯುಕ್ತರ ಪತ್ರ ಸಂಖ್ಯೆ: ಡಿಎಸ್‌ಕೆ/ಎಫ್‌ಐಎನ್/55/2010–11, ದಿನಾಂಕ 08–03–2011.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ 1994 ರಿಂದ 1999ರ ಅವಧಿಯಲ್ಲಿ ಶ್ರೀ ಹಾಲಸಿದ್ಧನಾಥ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತವು ಸರ್ಕಾರಕ್ಕೆ ಪಾವತಿಸಲು ಬಾಕಿಯಿದ್ದ ಕಬ್ಬು ಖರೀದಿ ತೆರಿಗೆ ₹ 1183.09 ಲಕ್ಷಗಳನ್ನು ಬಡ್ಡಿ ರಹಿತ ಸಾಲವನ್ನಾಗಿ ಪರಿವರ್ತಿಸಲಾಗಿದ್ದು, ದಿನಾಂಕ 31–03–2010ರ ಅಂತ್ಯಕ್ಕೆ ₹ 1391.17 ಲಕ್ಷಗಳ ಕ್ರೋಢೀಕೃತ ನಷ್ಟದಲ್ಲಿದ್ದು, ಕಾರ್ಖಾನೆಯು ವಿಸ್ತರಣಾ ಕಾರ್ಯಕ್ಕೆ ಸುಮಾರು ₹ 32.00 ಕೋಟಿಗಳ ಅಂದಾಜು ಇರುವುದರಿಂದ, ಈಗ ಕಾರ್ಖಾನೆ ಕೋರಿರುವ ಕಬ್ಬು ಖರೀದಿ ತೆರಿಗೆ ಸಾಲದ ಮೊತ್ತ ₹ 1183.09 ಲಕ್ಷಗಳನ್ನು ಸರ್ಕಾರದ ಷೇರು ಬಂಡವಾಳವನ್ನಾಗಿ ಪರಿವರ್ತಿಸಿದಲ್ಲಿ ಕಾರ್ಖಾನೆಯು ವಿಸ್ತರಣೆ ಹಾಗೂ ಸಹ ವಿದ್ಯುತ್ ಘಟಕಕ್ಕೆ ಅಗತ್ಯ ಸಾಲವನ್ನು ಬ್ಯಾಂಕುಗಳಿಂದ ಪಡೆದುಕೊಳ್ಳಲು ಸಹಾಯಕವಾಗುತ್ತದೆ. ಇಲ್ಲವಾದಲ್ಲಿ ₹ 1183.09 ಲಕ್ಷದ ಹೆಚ್ಚುವರಿ ಹೊರೆಯಿಂದ ಕಾರ್ಖಾನೆಯ ಯಾವುದೇ ಸಾಲವನ್ನು ಬ್ಯಾಂಕುಗಳಿಂದ ಪಡೆದುಕೊಳ್ಳಲು ಸಾಧ್ಯವಾಗುವುದಿಲ್ಲ. ರಾಜ್ಯದಲ್ಲಿನ ಸಹಕಾರಿ ಸಕ್ಕರೆ ಕಾರ್ಖಾನೆಗಳನ್ನು ಲಾಭದಾಯಕವಾಗಿ ನಡೆಸಲು ಅನುಕೂಲವಾಗುವಂತೆ ಕಾರ್ಖಾನೆಗಳು ಗರಿಷ್ಠ ಪ್ರಮಾಣದ ಕಬ್ಬು ನುರಿಸುವ ಸಾಮರ್ಥ್ಯ ಹಾಗೂ ವಿದ್ಯುತ್ ಉತ್ಪಾದನೆಗೆ ಉತ್ತೇಜನ ನೀಡುವ ದೃಷ್ಟಿಯಿಂದ ಹಾಗೂ ಕಾರ್ಖಾನೆಯನ್ನು ಆಧುನೀಕರಣಗೊಳಿಸುವ ಸಲುವಾಗಿ ಮತ್ತು ಆರ್ಥಿಕವಾಗಿ ಸಬಲಗೊಳ್ಳಲು ಹಾಗೂ ಕಾರ್ಖಾನೆಯ ವ್ಯಾಪ್ತಿ ಪ್ರದೇಶದ ರೈತರ ಹಿತದೃಷ್ಟಿಯಿಂದ ₹ 1183.09 ಲಕ್ಷ ಕಬ್ಬು ಖರೀದಿ ತೆರಿಗೆ ಮೊತ್ತವನ್ನು ಸರ್ಕಾರದ ಷೇರು ಬಂಡವಾಳವನ್ನಾಗಿ ಪರಿವರ್ತಿಸುವಂತೆ ಮತ್ತು ಕಾರ್ಖಾನೆಯ ಬೇಡಿಕೆಯನ್ನು ಬೇರೆ ಕಾರ್ಖಾನೆಗೆ ಪೂರ್ವನಿದರ್ಶನ ವಹಿಸದಂತೆ ಷರತ್ತು ವಿಧಿಸಿ ಕಾರ್ಖಾನೆಯ ಕೋರಿಕೆಯನ್ನು ಪರಿಗಣಿಸಲು ಕಬ್ಬು ಅಭಿವೃದ್ಧಿ ಆಯುಕ್ತರು ಮತ್ತು ಸಕ್ಕರೆ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಹಾಲಸಿದ್ಧನಾಥ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ನಿಪ್ಪಾಣಿ, ಬೆಳಗಾಂ ಜಿಲ್ಲೆ, ಇವರಿಂದ ಸರ್ಕಾರಕ್ಕೆ ಬರಬೇಕಾಗಿರುವ ಕಬ್ಬು ಖರೀದಿ ತೆರಿಗೆ ಬಾಕಿ ಮೊತ್ತ ₹ 1183.09 ಲಕ್ಷಗಳನ್ನು ಸರ್ಕಾರದ ಷೇರು ಬಂಡವಾಳವನ್ನಾಗಿ ಪರಿವರ್ತಿಸಲು ತೀರ್ಮಾನಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 18 ಸಸಕಾ 2011, ಬೆಂಗಳೂರು, ದಿನಾಂಕ: 15-12-2011**

ಶ್ರೀ ಹಾಲಸಿದ್ಧನಾಥ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ನಿಪ್ಪಾಣಿ, ಬೆಳಗಾಂ ಜಿಲ್ಲೆ, ಇವರಿಂದ ಸರ್ಕಾರಕ್ಕೆ ಬರಬೇಕಾಗಿರುವ ಕಬ್ಬು ಖರೀದಿ ತೆರಿಗೆ ಬಾಕಿ ಮೊತ್ತ ₹ 1183.09 (ರೂಪಾಯಿ ಹನ್ನೊಂದು ಕೋಟಿ ಎಂಭತ್ತೂಮೂರು ಲಕ್ಷದ ಒಂಭತ್ತು ಸಾವಿರ ಮಾತ್ರ) ಲಕ್ಷಗಳನ್ನು ಸರ್ಕಾರದ ಷೇರು ಬಂಡವಾಳವನ್ನಾಗಿ ಪರಿವರ್ತಿಸಿ ಆದೇಶಿಸಲಾಗಿದೆ.

ಈ ಆದೇಶವು ಕರ್ನಾಟಕ ಸರ್ಕಾರ (ಕಾರ್ಯಕಲಾಪಗಳ ನಿರ್ವಹಣೆ) ನಿಯಮ 1977ರ ನಿಯಮ 17 ರಡಿಯ ಉಪನಿಯಮ (2)ರ ವ್ಯಾಪ್ತಿಯಲ್ಲಿ ಬರುವುದಿದ್ದು, ಅದರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ರಾಮಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 147 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

(ಸಹಕಾರಿ ಸಕ್ಕರೆ)

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಹೊಸಪೇಟೆ ಕಂದಾಯ ತಾಲ್ಲೂಕಿನಲ್ಲಿ ಖಾಲಿ ಇರುವ ನೋಟರಿ ಹುದ್ದೆಯನ್ನು ಭರ್ತಿ ಮಾಡುವ ಬಗ್ಗೆ. (ಶ್ರೀ ವಿ.ಎ. ಸಯೀದ್ ನೋಟರಿ, ಹೊಸಪೇಟೆ ಇವರ ನಿಧನದಿಂದ ತೆರವು)

**ಓದಲಾಗಿದೆ:**
1) ಸರ್ಕಾರದ ಪತ್ರ ಸಂಖ್ಯೆ: ಲಾ 172 ಎಲ್‌ಸಿಎಲ್ 2010 ದಿ: 08-09-2010, ದಿ: 20-04-2011 ಹಾಗೂ 08-06-2011.
2) ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಳ್ಳಾರಿ ಇವರ ಪತ್ರ ಸಂಖ್ಯೆ: ರವಾನೆ ಸಂಖ್ಯೆ: 2966/2011/ಆಡಳಿತ ದಿ: 28-06-2011.
3) ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ: ಎಸ್‌ಆರ್ 114 (ಇ) ದಿನಾಂಕ: 24-02-2009.
4) ಅಧಿಸೂಚನೆ ಸಂಖ್ಯೆ: ಲಾ 61 ಎಲ್‌ಸಿಎಲ್ 2009 ದಿ: 24-07-2010.
5) ಸಂದರ್ಶನ ಸೂಚನಾ ಪತ್ರ ಸಂಖ್ಯೆ: ಲಾ 172 ಎಲ್‌ಸಿಎಲ್ 2010 ದಿ: 28-07-2011.

**ಪ್ರಸ್ತಾವನೆ :**

ಶ್ರೀ ವಿ.ಎ. ಸಯೀದ್, ನೋಟರಿ, ಹೊಸಪೇಟೆ ಇವರು ದಿ: 28-08-2009ರಂದು ನಿಧನರಾದ ಬಗ್ಗೆ ದೃಢೀಕೃತ ಮರಣ ಪ್ರಮಾಣ ಪತ್ರವು ಅವರ ಕುಟುಂಬ ವರ್ಗದವರಿಂದ ಸ್ವೀಕೃತಗೊಂಡಿದ್ದ ಮೇರೆಗೆ ಪರಿಶೀಲಿಸಿ ಸದರಿ ನೋಟರಿ ಹುದ್ದೆಯನ್ನು ಭರ್ತಿ ಮಾಡಲು ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977ರ ನಿಯಮ 12ರಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಳ್ಳಾರಿ ಇವರನ್ನು ಮೇಲೆ (1)ರಲ್ಲಿ ಓದಲಾದ ಸರ್ಕಾರದ ದಿನಾಂಕ: 08-09-2010 ಹಾಗೂ ತದನಂತರದ ಪತ್ರಗಳಲ್ಲಿ ಕೋರಲಾಗಿತ್ತು.

ಅದರಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 28-06-2011ರ ಪತ್ರದೊಂದಿಗೆ 38 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ (3)ರಲ್ಲಿ ಓದಲಾದ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ (4)ರಲ್ಲಿ ಓದಲಾದ ದಿನಾಂಕ: 24-07-2010ರ ಅಧಿಸೂಚನೆಯಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ (5)ರಲ್ಲಿ ಓದಲಾದ ದಿನಾಂಕ: 28-07-2011ರ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ಆಯ್ಕೆಪಟ್ಟಿಯನ್ನು ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲಾ 172 ಎಲ್‌ಸಿಎಲ್ 2010, ಬೆಂಗಳೂರು, ದಿನಾಂಕ: 15-12-2011**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಶ್ರೀ ಹೆಚ್.ಪಿ. ಕಲ್ಲಂಭಟ್, ವಕೀಲರು, S/o. ದಿ: ಹೆಚ್. ಪುಟ್ಟಭಟ್, ನಂ. 1/88, ಸಂಗೀತ ಭಾರತಿ, ಚಿತ್ತವಾಡಿಗಿ, ಹೊಸಪೇಟೆ, ಬಳ್ಳಾರಿ ಜಿಲ್ಲೆರವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಹೊಸಪೇಟೆ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ನೋಟರಿ ನಿಯಮಗಳಲ್ಲಿ ನಿಗದಿಪಡಿಸಲಾದ ರೂ. 1000.00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ, 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ಶಕುಂತಲ**

ಪಿ.ಆರ್. 148 ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಡಿ.ಎ. ಅಶೋಕ, ಪ್ರಾಧ್ಯಾಪಕರು, ಹಾಗೂ ವಿಭಾಗದ ಮುಖ್ಯಸ್ಥರು, ಮನೋರೋಗ ಚಿಕಿತ್ಸಾ ವಿಭಾಗ ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ಇವರ ಅನಧಿಕೃತ ಗೈರು ಹಾಜರಿಯ ಬಗ್ಗೆ ಶಿಸ್ತು ಕ್ರಮ ಕುರಿತು.

**ಓದಲಾಗಿದೆ:**
1. ಕಾರಣ ಕೇಳುವ ನೋಟೀಸು ಸಂ. ಆಕುಕ 91 ಎಂಎಂಸಿ 2008, ದಿನಾಂಕ: 24-04-2008.
2. ಡಾ॥ ಡಿ. ಅಶೋಕ, ಪ್ರಾಧ್ಯಾಪಕರು, ಹಾಗೂ ವಿಭಾಗದ ಮುಖ್ಯಸ್ಥರು, ಮನೋರೋಗ ಚಿಕಿತ್ಸಾ ವಿಭಾಗ ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ಇವರ ಹೇಳಿಕೆ ದಿನಾಂಕ: 18-08-2009.
3. ಸರ್ಕಾರದ ಆದೇಶ ಸಂ. ಆಕುಕ 91 ಎಂಎಂಸಿ 2008, ದಿನಾಂಕ: 06-11-2009.
4. ಶ್ರೀ ಕೆ. ರಾಜಶೇಖರ್, ನಿವೃತ್ತ ಜಿಲ್ಲಾ ಮತ್ತು ಸೇಷನ್ಸ್ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಇವರು ದಿನಾಂಕ: 21-06-2010ರಂದು ಸಲ್ಲಿಸಿರುವ ವಿಚಾರಣಾ ವರದಿ.
5. 2ನೇ ಕಾರಣ ಕೇಳುವ ನೋಟೀಸು ಸಂ. ಆಕುಕ 91 ಕೆವಿಎಂ 2008, ದಿನಾಂಕ: 30-03-2011, 30-06-2011.
6. ಡಾ॥ ಡಿ. ಅಶೋಕ, ಪ್ರಾಧ್ಯಾಪಕರು ಹಾಗೂ ವಿಭಾಗದ ಮುಖ್ಯಸ್ಥರು, ಮನೋರೋಗ ಚಿಕಿತ್ಸಾ ವಿಭಾಗ, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ಇವರ ಹೇಳಿಕೆ, ಸರ್ಕಾರದಲ್ಲಿ ಸ್ವೀಕೃತವಾದ ದಿನಾಂಕ: 28-07-2011.

**ಪ್ರಸ್ತಾವನೆ :**

ಡಾ॥ ಡಿ.ಎ. ಅಶೋಕ, ಪ್ರಾಧ್ಯಾಪಕರು, ಹಾಗೂ ವಿಭಾಗದ ಮುಖ್ಯಸ್ಥರು, ಮನೋರೋಗ ಚಿಕಿತ್ಸಾ ವಿಭಾಗ, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ಇವರು ಸೇವೆ ಸಲ್ಲಿಸುತ್ತಿದ್ದ ಅವಧಿಯಲ್ಲಿ, ದಿನಾಂಕ: 17-11-2006 ರಿಂದ ಸರ್ಕಾರಿ ಕೆಲಸಕ್ಕೆ ಗೈರು ಹಾಜರಾಗಿದ್ದು, ಸಕ್ಷಮ ಪ್ರಾಧಿಕಾರದಿಂದ ರಜೆ ಮಂಜೂರಾತಿ ಮಾಡಿಸಿಕೊಳ್ಳದೇ ಅಥವಾ ಪೂರ್ವಭಾವಿ ಅನುಮತಿ ಪಡೆಯದೇ ಸೇವೆಗೆ ಹಾಜರಾಗದೇ, ಅನಧಿಕೃತವಾಗಿ ಗೈರು ಹಾಜರಾಗಿದ್ದು, ಸದರಿಯವರಿಗೆ ಮೇಲೆ ಕ್ರ.ಸಂ. (1) ರಲ್ಲಿ ಓದಲಾದ ದಿನಾಂಕ: 24-04-2008ರ ಕಾರಣ ಕೇಳುವ ನೋಟೀಸನ್ನು ದೋಷಾರೋಪಣೆಯನ್ನೊಳಗೊಂಡಂತೆ, ಅನುಬಂಧ-1 ರಿಂದ 4 ರವರೆಗೆ ಲಗತ್ತಿಸಿ, 30 ದಿವಸಗಳೊಳಗಾಗಿ ಲಿಖಿತ ಹೇಳಿಕೆಯನ್ನು ನೀಡುವಂತೆ ಸೂಚಿಸಿ ಜಾರಿ ಮಾಡಲಾಯಿತು.

ಡಾ॥ ಡಿ.ಎ. ಅಶೋಕ, ಪ್ರಾಧ್ಯಾಪಕರು, ಹಾಗೂ ವಿಭಾಗದ ಮುಖ್ಯಸ್ಥರು, ಮನೋರೋಗ ಚಿಕಿತ್ಸಾ ವಿಭಾಗ, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ಇವರು ಕಾರಣ ಕೇಳುವ ನೋಟಿಸಿಗೆ ಸಮಜಾಯಿಷಿ ನೀಡಿ, ದಿನಾಂಕ: 05-07-2006 ರಿಂದ 02-09-2006 ರವರೆಗೆ 60 ದಿನಗಳ ಗಳಿಕೆ ರಜೆಯನ್ನು ಕೋರಿ ಅರ್ಜಿ ಸಲ್ಲಿಸಿದ್ದು, ಪ್ರಾಚಾರ್ಯರು ಸರ್ಕಾರಿ ವೈದ್ಯಕೀಯ ಕಾಲೇಜು ಮೈಸೂರು ಇವರು ಗಳಿಕೆ ರಜೆಯನ್ನು ಮಂಜೂರು ಮಾಡಿರುತ್ತಾರೆ. ರಜೆ ಮುಗಿದ ನಂತರ ಕರ್ತವ್ಯಕ್ಕೆ ಹಾಜರಾಗಬೇಕಾಗಿದ್ದು, ಸೊಂಟ ನೋವು ಜಾಸ್ತಿಯಾಗಿದ್ದರಿಂದ ಕರ್ತವ್ಯಕ್ಕೆ ಹಾಜರಾಗಲು ಸಾಧ್ಯವಾಗದೇ ಮನೆಯಲ್ಲಿಯೇ ವೈದ್ಯೋಪಚಾರ ಪಡೆಯುತ್ತಿದ್ದರೆಂದು ಹೇಳಿರುತ್ತಾರೆ. ತಮ್ಮ ಸೊಂಟ ನೋವು ಉಲ್ಬಣವಾದ್ದರಿಂದ ಮೂಳೆ ರೋಗ ತಜ್ಞರಲ್ಲಿಗೆ ಸಲಹೆ ಪಡೆಯಲು ಹೋದಾಗ chronic disc prolapse and lumber spondilosis ಕಾಯಿಲೆ ಇರುವುದಾಗಿ ತಿಳಿಸಿ, ದೀರ್ಘಕಾಲ ವೈದ್ಯೋಪಚಾರ ಪಡೆಯಲು ಸಲಹೆ ನೀಡಿದ್ದರಿಂದ ಕರ್ತವ್ಯಕ್ಕೆ ಮರು ಹಾಜರಾಗಲು ಸಾಧ್ಯವಾಗದೆ ರಜೆಯಲ್ಲಿಯೇ ಮುಂದುವರೆದಿರುವುದಾಗಿ ತಿಳಿಸಿರುತ್ತಾರೆ. ರಜೆಯ ಅವಧಿಯಲ್ಲಿ ವಾಸದ ವಿಳಾಸದ ಬಗ್ಗೆ ಯಾವುದೇ ಸುಳ್ಳು ಮಾಹಿತಿಯನ್ನು ನೀಡಿರುವುದಿಲ್ಲವೆಂದು, ತಿಳಿಸಿರುತ್ತಾರೆ. ಮುಂದುವರೆದು, ರೋಗವು ದೀರ್ಘ ಕಾಲದಿಂದ ವಾಸಿಯಾಗದೇ ಉಲ್ಬಣವಾಗುತ್ತಿದ್ದು ಸರ್ಕಾರಿ ಸೇವೆಯಲ್ಲಿ ಮುಂದುವರೆಯಲು ದೈಹಿಕವಾಗಿ ಹಾಗೂ ಮಾನಸಿಕವಾಗಿ ಸಮರ್ಥವಾಗದಿರುವುದರಿಂದ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡಿ ಅಂದಿನಿಂದಲೇ, ಎಲ್ಲಾ ಆರ್ಥಿಕ ಮತ್ತು ನಿವೃತ್ತಿ ಸೌಲಭ್ಯಗಳನ್ನು ನೀಡುವಂತೆ ಮೇಲಿನ ಕ್ರ.ಸಂ. (2) ರಲ್ಲಿ ಓದಲಾದ ದಿನಾಂಕ: 18-08-2009 ರ ಲಿಖಿತ ಹೇಳಿಕೆಯಲ್ಲಿ ತಿಳಿಸಿರುತ್ತಾರೆ.

ಡಾ॥ ಡಿ.ಎ. ಅಶೋಕ, ಪ್ರಾಧ್ಯಾಪಕರು, ಹಾಗೂ ವಿಭಾಗದ ಮುಖ್ಯಸ್ಥರು, ಮನೋರೋಗ ಚಿಕಿತ್ಸಾ ವಿಭಾಗ, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ಇವರ ದಿನಾಂಕ: 17-11-2006 ರಿಂದ ಅನಧಿಕೃತ ಗೈರು ಹಾಜರಿಯಲ್ಲಿದ್ದುಕೊಂಡು, ಸರ್ಕಾರದ ನೋಟಿಸಿಗೆ ಉತ್ತರವಾಗಿ ಸ್ವ-ಇಚ್ಛಾ ನಿವೃತ್ತಿ ಕೋರಿರುವುದು ಸಮಂಜಸವಾಗುವುದಿಲ್ಲ. ಆದ್ದರಿಂದ ಸತ್ಯಾ-ಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಕ್ರ.ಸಂ. (3) ರಲ್ಲಿ ಓದಲಾದ ದಿನಾಂಕ: 06-11-2009ರ ಆದೇಶದಲ್ಲಿ, ಇವರ ವಿರುದ್ಧ ಅನಧಿಕೃತ ಗೈರು ಹಾಜರಿಯ ಬಗ್ಗೆ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 (2) ರ ಪ್ರಕಾರ ಇಲಾಖಾ ವಿಚಾರಣೆಯನ್ನು ನಡೆಸಲು ಶ್ರೀ ಕೆ. ರಾಜಶೇಖರ್, ಜಿಲ್ಲಾ ನ್ಯಾಯಾಧೀಶರು (ನಿವೃತ್ತ) ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕರ್ನಾಟಕ ನಾಗರಿಕ ಸೇವಾ ನಿಯಮಗಳ ನಿಯಮ 11 (5) ರ ಪ್ರಕಾರ ಮುಖ್ಯ ಆಡಳಿತಾಧಿಕಾರಿ, ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಯಿತು.

ವಿಚಾರಣಾಧಿಕಾರಿಯವರು ಮೇಲೆ ಕ್ರ.ಸಂ. (4) ರಲ್ಲಿ ಓದಲಾದ ಪತ್ರದೊಂದಿಗೆ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಆಪಾದಿತ ವೈದ್ಯರು ವಿಚಾರಣೆಗೆ ಹಾಜರಾಗದೇ, ಕಾಲ ಕಾಲಕ್ಕೆ ಲಿಖಿತ ಹೇಳಿಕೆಯನ್ನು ಕಳುಹಿಸಿರುತ್ತಾರೆ. ವಿಚಾರಣೆಗೆ ಹಾಜರಾಗುವಂತೆ ಕನ್ನಡ ದಿನಪತ್ರಿಕೆ ವಿಜಯ ಕರ್ನಾಟಕ ಮತ್ತು ಆಂಗ್ಲ ದಿನಪತ್ರಿಕೆ ಡೆಕ್ಕನ ಹೆರಾಲ್ಡ್‌ಗಳಲ್ಲಿ ದಿನಾಂಕ: 27-03-2010ರಂದು ವಿಚಾರಣೆಗೆ ಹಾಜರಾಗುವಂತೆ ದಿನಾಂಕ: 13-03-2010ರಂದು ಪ್ರಕಟಣೆ ನೀಡಲಾಗಿರುತ್ತದೆ. ಆದಾಗ್ಯೂ ಆಪಾದಿತ ವೈದ್ಯರು, ಸ್ಪಂದಿಸಿಲ್ಲ ಹಾಗೂ ಖುದ್ದಾಗಿ ವಿಚಾರಣೆಗೆ ಹಾಜರಾಗಿರುವುದಿಲ್ಲ. ಸರ್ಕಾರದ ದಿನಾಂಕ 24.04.2008 ರ ನೋಟಿಸಿಗೆ ನೀಡಿದ ಹೇಳಿಕೆಯನ್ನೇ ಪರಿಗಣಿಸಲು ಕೋರಿರುವುದು ಕಂಡು ಬರುತ್ತದೆ. ಆದ್ದರಿಂದ, ಸದರಿಯವರ ವಿರುದ್ಧ ಸಾಕ್ಷಿದಾರರು ನೀಡಿದ ಹೇಳಿಕೆಯನ್ನು ಎಲ್ಲಾ ವಿಧದಿಂದಲೂ ಪುರಸ್ಕರಿಸಬಹುದೆಂದು ಅಭಿಪ್ರಾಯ ಪಟ್ಟಿರುತ್ತಾರೆ. ಒಂದು ವೇಳೆ ಆರೋಪಿತ ವೈದ್ಯರು ಸ್ವ-ಇಚ್ಛಾ ನಿವೃತ್ತಿಯನ್ನು ಬಯಸಿದ್ದರೆ, ಕರ್ತವ್ಯಕ್ಕೆ ಹಾಜರಾಗಿ ನಿಯಮಾವಳಿ ಪ್ರಕಾರ ಸ್ವ-ಇಚ್ಛಾ ನಿವೃತ್ತಿಯ ಬೇಡಿಕೆಯನ್ನು ಮೇಲಾಧಿಕಾರಿಗಳ

ಮೂಲಕ ಸರ್ಕಾರಕ್ಕೆ ಸಲ್ಲಿಸಬಹುದಾಗಿತ್ತು. ಇವರು ಆ ರೀತಿ ನಡೆದುಕೊಂಡಿರುವುದಿಲ್ಲ. ಈ ರೀತಿ ದಿನಾಂಕ: 17–11–2006 ರಿಂದ ಈವರೆಗೆ ಅನಧಿಕೃತ ಗೈರು ಹಾಜರಾಗಿರುವುದು ಹಾಗೂ ಖುದ್ದಾಗಿ ವಿಚಾರಣೆಗೆ ಹಾಜರಾಗದೇ, ಜೆರಾಕ್ಸ್ ಪ್ರತಿ ಅಥವಾ ಫ್ಯಾಕ್ಸ್ ಮೂಲಕ ಬಂದ ಅರ್ಜಿ/ಸಹಿಯಾಗಿರುವುದಾಗಿ ಕಂಡು ಬರುತ್ತದೆ ಎಂದು ದಾಖಲಾತಿಗಳ ಮೂಲಕ ವಿಚಾರಣಾಧಿಕಾರಿ ಆರೋಪಿ ವೈದ್ಯರು ವಿದೇಶದಲ್ಲಿರಬಹುದೆಂಬ ಸಂಶಯವನ್ನು ವ್ಯಕ್ತಪಡಿಸಿರುತ್ತಾರೆ. ಆಪಾದಿತ ವೈದ್ಯರಿಗೆ ಅನೇಕ ಕಾಲಾವಕಾಶವನ್ನು ಕೊಟ್ಟರು ಸಹ ವಿಚಾರಣೆಗೆ ಹಾಜರಾಗದೇ ಅವರ ಪರ ಯಾವ ಸಾಕ್ಷಿ ಪುರಾವೆಯನ್ನು ಕೊಟ್ಟಿರುವುದಿಲ್ಲವೆಂದೂ ತಿಳಿಸಿ, ಸದರಿಯವರ ಅನಧಿಕೃತ ಗೈರು ಹಾಜರಿಯ ಆರೋಪವು ರುಜುವಾತಾಗಿರುವುದಾಗಿ, ವಿಚಾರಣಾಧಿಕಾರಿಯವರು ತಿಳಿಸಿರುತ್ತಾರೆ.

ವಿಚಾರಣಾಧಿಕಾರಿಯವರು ಆರೋಪಿತ ವೈದ್ಯಾಧಿಕಾರಿಯ ಅನಧಿಕೃತ ಗೈರು ಹಾಜರಿಯ ಬಗ್ಗೆ ಸರ್ಕಾರಕ್ಕೆ ಸಲ್ಲಿಸಲಾದ ವಿಚಾರಣಾ ವರದಿಯ ಪ್ರತಿಯನ್ನು ಮೇಲೆ ಕ್ರ.ಸಂ. (5) ರಲ್ಲಿ ಓದಲಾದ ದಿನಾಂಕ: 30–03–2011 ಹಾಗೂ 30–06–2011ರ 2ನೇ ಕಾರಣ ಕೇಳುವ ನೋಟಿಸಿನೊಂದಿಗೆ ಜಾರಿ ಮಾಡಲಾಗಿತ್ತು. ಸದರಿ ನೋಟಿಸಿಗೆ ಮೇಲೆ ಕ್ರ.ಸಂ. (4)ರಲ್ಲಿ ಓದಲಾದ ಹೇಳಿಕೆಯಲ್ಲಿ ಆರೋಪಿ ವೈದ್ಯಾಧಿಕಾರಿಯವರಾದ ಶ್ರೀ ಡಿ.ಎ. ಅಶೋಕ ಇವರು ಲಿಖಿತ ಹೇಳಿಕೆ ಸಲ್ಲಿಸಿ, chronic disc prolapse and lumber spondilosis ಕಾಯಿಲೆ ಉಲ್ಬಣವಾದ್ದರಿಂದ ವೈದ್ಯರು ದೀರ್ಘ ಕಾಲದ ವೈದ್ಯೋಪಚಾರ ಮತ್ತು ವಿಶ್ರಾಂತಿ ಪಡೆಯಲು ಸಲಹೆ ನೀಡಿದ್ದರಿಂದ ಕರ್ತವ್ಯಕ್ಕೆ ಮರು ಹಾಜರಾಗದೇ, ರಜೆಯಲ್ಲಿಯೇ ಮುಂದುವರೆದು, ದಿನಾಂಕ: 17–11–2006ರಿಂದ ಕರ್ತವ್ಯಕ್ಕೆ ಗೈರು ಹಾಜರಾಗಿರುವುದಾಗಿ ತಿಳಿಸಿ, ಅಂದಿನಿಂದಲೇ ಸ್ವ–ಇಚ್ಛಾ ನಿವೃತ್ತಿಯನ್ನು ಹೊಂದಲು ಮನವಿ ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ. ಹಾಗೂ ಸದರಿಯವರ ಅನಧಿಕೃತ ಗೈರು ಹಾಜರಿಯನ್ನು ಡೈಸ್‌ನಾನ್ ಎಂದು ಪರಿಗಣಿಸಲು ಕೋರಿರುತ್ತಾರೆ.

ಡಾ॥ ಡಿ.ಎ. ಅಶೋಕ, ಪ್ರಾಧ್ಯಾಪಕರು, ಹಾಗೂ ವಿಭಾಗದ ಮುಖ್ಯಸ್ಥರು, ಮನೋರೋಗ ಚಿಕಿತ್ಸಾ ವಿಭಾಗ, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ಇವರು ದಿನಾಂಕ: 17–11–2006ರಿಂದ ಅನಧಿಕೃತ ಗೈರು ಹಾಜರಾಗಿರುವ ಪ್ರಸ್ತಾವನೆಯನ್ನು ವಿಚಾರಣಾಧಿಕಾರಿಯವರು ಸಲ್ಲಿಸಿರುವ ವಿಚಾರಣಾ ವರದಿ ಹಾಗೂ ಸದರಿ ವಿಚಾರಣಾ ವರದಿಗೆ ಆರೋಪಿ ವೈದ್ಯರು, ನೀಡಿರುವ ಹೇಳಿಕೆಯನ್ನು ಎಲ್ಲಾ ಲಭ್ಯವಿರುವ ದಾಖಲೆಗಳೊಂದಿಗೆ ಪರಿಶೀಲಿಸಿ, ಸದರಿಯವರನ್ನು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8 (vi) ರ ಪ್ರಕಾರ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ. ಆಕುಕ 91 ಎಂಎಂಸಿ 2008, ಬೆಂಗಳೂರು, ದಿನಾಂಕ: 15–12–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಡಾ॥ ಡಿ.ಎ. ಅಶೋಕ, ಪ್ರಾಧ್ಯಾಪಕರು ಹಾಗೂ ವಿಭಾಗದ ಮುಖ್ಯಸ್ಥರು, ಮನೋರೋಗ ಚಿಕಿತ್ಸಾ ವಿಭಾಗ, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು (ಅನಧಿಕೃತ ಗೈರು ಹಾಜರಿಯಲ್ಲಿರುವ) ಇವರಿಗೆ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8 (vi) ರ ಪ್ರಕಾರ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ವಿಧಿಸಿ ಆದೇಶಿಸಿದೆ.

ದಿನಾಂಕ: 17–11–2006ರಿಂದ ಈ ಆದೇಶದ ದಿನಾಂಕದವರೆಗಿನ ಅನಧಿಕೃತ ಗೈರು ಹಾಜರಿಯ ಅವಧಿಯನ್ನು ಲೆಕ್ಕಕ್ಕಿಲ್ಲದ ಅವಧಿ (Dies-Non) ಎಂದು ಪರಿಗಣಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಸಾಯಿ ಬಾಬಾ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ವೈದ್ಯಕೀಯ ಶಿಕ್ಷಣ)

ಪಿ.ಆರ್. 149

## COMMERCE AND INDUSTRIES SECRETARIAT

**Sub :** Allotment of land to M/s Britannia Industries Ltd. in 3rd Phase of KIADB Industrial Area, Doddaballapura Taluk, Bangalore Rural District.

**Ref :** G.O. No. CI 180 SPI 2011 dated 22.08.2011.

**Preamble:**

The project proposal of M/s Britannia Industries Ltd. to establish a unit for manufacture of "Biscuits/other Bakery Products & R&D Cetre at KIADB Industrial Area, 3rd Phase, Doddaballapur, Bangalore Rural District, with an investment of Rs. 100.00 Cr. Was approved in the 25th State High Level Clearance Committee meeting held on 14.07.2011. The Committee decided to consider the extent of land requested by the company, subject to assessmet of land by the Land Audit Committee. Accordingly, G.O. read above was issued.

Now, the Land Audit Committee in its 17th meeting held on 15.09.2011 has examined and recommended to allot the requirement of land to M/s Britannia Industries Ltd.

Hence the following order.

**Government Order No. CI 186 SPI 2011, Bangalore Dated: 12-12-2011.**

Government is pleased to accord approval to allot 20 acres of land to M/s. Britannia Industries Ltd. in KIADB Industrial Area, 3rd Phase, Doddaballapur, Bangalore Rural District for establishment of a unit for manufacture of "Biscuits/other Bakery Products & R&D Centre as approved vide G.O. No. CI 180 SPI 2011 dated 22.08.2011.

The terms & conditions of G.O. read above is remain the same.

By Order and in the name of the Governor of Karnataka,

**Jyothi R.J.**

Desk Officer (Technical Cell)

Commerce & Industries Department

PR. 150

## ಇಂಧನ ಸಚಿವಾಲಯ

**ವಿಷಯ :** ಮೆ॥ ಅಗ್ರವಾಲ್ ಮಿನರಲ್ಸ್ (ಗೋವ) ಪ್ರೈವೇಟ್ ಲಿಮಿಟೆಡ್ ಕಂಪನಿಗೆ 2.1 ಮೆ.ವ್ಯಾ. ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು ಮೆ॥ ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಲಿಮಿಟೆಡ್ ಕಂಪನಿರವರಿಂದ ವರ್ಗಾಯಿಸುವ ಕುರಿತು.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 191 ಎನ್‌ಸಿಇ 2005 ದಿನಾಂಕ: 19.8.2005.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 100 ಎನ್‌ಸಿಇ 2005 ದಿನಾಂಕ: 30.8.2005.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 177 ಎನ್‌ಸಿಇ 2008 ದಿನಾಂಕ: 24.12.2008.
4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 397 ಎನ್‌ಸಿಇ 2011 ದಿನಾಂಕ: 22.10.2011.
5) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/AMGPL-2.1 (SIL-75.60 MW)/2011/4505 ದಿನಾಂಕ: 30.11.2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮೆ॥ ಸುಜ್ಲಾನ್ ಡೆವಲಪರ್ಸ್ ಲಿಮಿಟೆಡ್ ಕಂಪನಿಗೆ ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಒಟ್ಟು 82.6 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು. ಇದರಲ್ಲಿ 15.60 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಬಳ್ಳಾರಿ ಜಿಲ್ಲೆಯ ಕುರುಗೋಡು ಮತ್ತು ಸಿಂದಿಗೆರೆ ಗ್ರಾಮಗಳಲ್ಲಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಮೆ॥ ಸುಜ್ಲಾನ್ ಡೆವಲಪರ್ಸ್ ಲಿಮಿಟೆಡ್ ಮತ್ತು ಮೆ॥ ಸುಜ್ಲಾನ್ ಡೆವಲಪರ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ರಾಜ್ಯದಲ್ಲಿ ಹಂಚಿಕೆಯಾಗಿರುವ ವಿವಿಧ ಪವನ ವಿದ್ಯುತ್ ಯೋಜನೆಗಳನ್ನು ಅನುಷ್ಠಾನ ಮಾಡಲು ಮೆ॥ ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಲಿಮಿಟೆಡ್ ಎಂಬ ಕಂಪನಿಯ ಹೆಸರಿಗೆ ಬದಲಾವಣೆ ಮಾಡಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ (3)ರ ಆದೇಶದಲ್ಲಿ ಮೆ॥ ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಲಿಮಿಟೆಡ್ ಕಂಪನಿಗೆ ಅನುಷ್ಠಾನ ಮಾಡಲು ಬಳ್ಳಾರಿ ಜಿಲ್ಲೆಯ ಕುರುಗೋಡು ಮತ್ತು ಸಿಂದಿಗೆರೆ ಗ್ರಾಮಗಳಲ್ಲಿ ಅನುಮತಿಸಲಾದ 15.6 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 40.25 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ (4)ರ ಸರ್ಕಾರಿ ಆದೇಶದಲ್ಲಿ ಮೆ॥ ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಲಿಮಿಟೆಡ್ ಕಂಪನಿಗೆ ಬಳ್ಳಾರಿ ಜಿಲ್ಲೆಯ ಕುರುಗೋಡು ಮತ್ತು ಸಿಂದಿಗೆರೆ ಗ್ರಾಮಗಳಲ್ಲಿ ಅನುಮತಿಸಲಾದ 40.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 75.60 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಲಿಮಿಟೆಡ್ ಕಂಪನಿರವರಿಗೆ ಕುರುಗೋಡು ಮತ್ತು ಸಿಂದಿಗೆರೆ ಗ್ರಾಮಗಳಲ್ಲಿ ಅನುಮತಿಸಲಾದ 75.60 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 2.1 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ॥ ಅಗ್ರವಾಲ್ ಮಿನರಲ್ಸ್ (ಗೋವ) ಪ್ರೈವೇಟ್ ಲಿಮಿಟೆಡ್ ಕಂಪನಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಅಲ್ಲದೆ, ಸದರಿ ಯೋಜನೆಗೆ ಅವಶ್ಯಕವಾದ ಜಮೀನು ಕಂದಾಯ ಜಮೀನಾಗಿದ್ದು, ಈ ಯೋಜನೆಯನ್ನು 31.03.2012ರೊಳಗೆ ಅನುಷ್ಠಾನಗೊಳಿಸಲಿದ್ದು, ಉತ್ಪಾದನೆ ಆಗುವ ವಿದ್ಯುತ್ತನ್ನು ಪಿ.ಪಿ.ಎ. ಮೂಲಕ ಎಸ್ಕಾಂಗೆ ಸರಬರಾಜು ಮಾಡಲಾಗುವುದೆಂದು ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 439 ಎನ್‌ಸಿಇ 2011, ಬೆಂಗಳೂರು, ದಿನಾಂಕ 15–12–2011**

ಮೆ॥ ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಲಿಮಿಟೆಡ್ ಕಂಪನಿಯವರಿಗೆ ಕುರುಗೋಡು ಮತ್ತು ಸಿಂದಿಗೆರೆ ಗ್ರಾಮಗಳಲ್ಲಿ ಅನುಮತಿಸಲಾದ 75.60 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 2.1 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ॥ ಅಗ್ರವಾಲ್ ಮಿನರಲ್ಸ್ (ಗೋವ) ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಲಾಗಿದೆ.

Geographical Area Description

| Location and District | Description of the area |
|---|---|
| Kurugodu and Sindigere villages of Bellary Taluk and Bellary District | The potential area identified as "A" & "B" are situated close by Kurugod and Sindigere villages. These two areas are of as open scrub & low attitude potentials. The proposed area is covered in the following Geographical Co-ordinates.<br>**Latitude:** 15º20'0"- 15º25'0" N<br>**Longitude:** 76º47'30"- 76º55'0" E<br>Ridge peakes: 599, 592, 554, 580, 572m AMSL.<br>Toposheet No: 57A/15 |

Land Details of the Project

| Village Name | Taluk/District | MW | Land Survey Number | No. of WTGs | Extent in Land (Acres) | WTG Number |
|---|---|---|---|---|---|---|
| Kurugodu | Bellary/Bellary | 2.1 | 472 | 1 No. | 2 Acres per WTG | SND-106 |

1 ಮೆ॥ ಅಗ್ರವಾಲ್ ಮಿನರಲ್ಸ್ (ಗೋವ) ಪ್ರೈವೇಟ್ ಲಿಮಿಟೆಡ್ ರವರು 45 ದಿನಗಳ ಒಳಗೆ ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 PPA is assined to GESCOM,

3 ಸದರಿ ಕಂಪನಿಯ ಯೋಜನೆಯನ್ನು ದಿನಾಂಕ 31–3–2012ರೊಳಗಾಗಿ ಅನುಷ್ಠಾನಗೊಳಿಸುವುದು. ಈ ಕುರಿತಂತೆ ಕ್ರೆಡಲ್ ಅಭಿವೃದ್ಧಿದಾರರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು (commitment letter)

4 ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 151 ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ॥ ಎಮಿಟ್ರಾನಿಕ್ಸ್ ಪ್ರೈವೇಟ್ ಲಿಮಿಟೆಡ್ ರವರ ಅನುಷ್ಠಾನಗೊಂಡಿರುವ 1.25 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಶ್ರೀ ಕೆ. ರಾಮಕೃಷ್ಣನ್ ರವರಿಗೆ ವರ್ಗಾಯಿಸುವ ಕುರಿತು.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಇಎನ್ 440 ಎನ್‌ಸಿಇ 2004, ದಿನಾಂಕ: 01–01–2005

**2)** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/K.R-APL-1.25 MW/2011/4573, ದಿನಾಂಕ 30/11–01–12–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮೆ॥ ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ, ಚಿತ್ರದುರ್ಗ ಜಿಲ್ಲೆಯ ಜೋಗಿಮಟ್ಟಿ ಗ್ರಾಮದಲ್ಲಿ ಹಂಚಿಕೆಯಾಗಿದ್ದ 20.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 1.25 ಮೆಗಾ ವ್ಯಾಟ್ ಸಾಮರ್ಥ್ಯವನ್ನು ಮೆ॥ ಎಮಿಟ್ರಾನಿಕ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ವರ್ಗಾಯಿಸಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಎಮಿಟ್ರಾನಿಕ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ವರ್ಗಾವಣೆಯಾಗಿರುವ 1.25 ಮೆ.ವ್ಯಾ. ಸಾಮರ್ಥ್ಯದ ಮೇಲ್ಕಂಡ ಪವನ ವಿದ್ಯುತ್ ಯೋಜನೆಯು ದಿನಾಂಕ 22–3–2005ರಲ್ಲಿ ಅನುಷ್ಠಾನಗೊಂಡಿದ್ದು, ಅನುಷ್ಠಾನಗೊಂಡಿರುವ ಈ ಯೋಜನೆಯನ್ನು ಶ್ರೀ ಕೆ. ರಾಮಕೃಷ್ಣನ್ ರವರಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿದ್ದು, ಅಲ್ಲದೆ, ಸದರಿ ಯೋಜನೆಯ ಭೂಮಿಯು ಜೋಗಿಮಟ್ಟಿ, ಚಿತ್ರದುರ್ಗ ಜಿಲ್ಲೆ, ಸರ್ವೆ ನಂ. 33ರ 1 ಎಕರೆ ಅರಣ್ಯ ಪ್ರದೇಶದಲ್ಲಿರುತ್ತದೆ ಮತ್ತು ಸದರಿಯವರು ವಿದ್ಯುತ್ ಸರಬರಾಜು ಕಂಪನಿಯವರೊಂದಿಗೆ ವಿದ್ಯುತ್ ಖರೀದಿ ಒಪ್ಪಂದ ಮಾಡಿಕೊಳ್ಳುವುದಾಗಿ ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 458 ಎನ್‌ಸಿಇ 2011, ಬೆಂಗಳೂರು, ದಿನಾಂಕ 17–12–2011**

ಮೆ॥ ಎಮಿಟ್ರಾನಿಕ್ಸ್ ಪ್ರೈವೇಟ್ ಲಿಮಿಟೆಡ್ ರವರ ಚಿತ್ರದುರ್ಗ ಜಿಲ್ಲೆಯ ಜೋಗಿಮಟ್ಟಿ ಗ್ರಾಮದಲ್ಲಿ ಅನುಷ್ಠಾನಗೊಂಡಿರುವ 1.25 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಶ್ರೀ ಕೆ. ರಾಮಕೃಷ್ಣನ್ ರವರಿಗೆ ಈ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಲಾಗಿದೆ:–

1 ಶ್ರೀ ಕೆ. ರಾಮಕೃಷ್ಣನ್ ರವರು 45 ದಿನಗಳ ಒಳಗೆ ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು

2 PPA is assigned to BESCOM

3 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 152 ಇಂಧನ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ ಪ್ರಶಾಂತ್ ಪಿ ಬಾರಿಗಿಡದ್, ಉಪ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ ಜಿಲ್ಲಾ ಪಂಚಾಯತ್, ಚಿತ್ರದುರ್ಗ ಇಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅವಧಿಯಲಿ ಇವರ ಮೇಲಿದ್ದ ಆರೋಪಗಳಿಂದ ದೋಷಮುಕ್ತಗೊಳಿಸುವ ಬಗ್ಗೆ.

**ಓದಲಾಗಿದೆ :**
1) ಜವಳಿ ಅಭವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈ ಮಗ್ಗ ಮತ್ತು ಜವಳಿ ಇವರ ಪತ್ರ ಸಂಖ್ಯೆ: ಕೈಜಿಇ/ಅ/ಸಿ–4/2005–06, ದಿನಾಂಕ 06–07–2005.
2) ಕಾರಣ ಕೇಳುವ ನೋಟೀಸ್ ದಿನಾಂಕ 28–02–2006
3) ಕಾರಣ ಕೇಳುವ ನೊಟೀಸಿಗೆ ಲಿಖಿತ ಹೇಳಿಕೆ ನೀಡಿರುವ ದಿನಾಂಕ 21–07–2006
4) ಸರ್ಕಾರದ ಆದೇಶ ಸಂಖ್ಯೆ: ವಾಕೈ/160/ಕೈಸೇವಿ/2005, ದಿನಾಂಕ 28–10–2006
5) ವಿಚಾರಣಾಧಿಕಾರಿಗಳು, ವಿಚಾರಣಾ ವರದಿ ಸಲ್ಲಿಸಿರುವ ದಿನಾಂಕ 12–02–2007
6) ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಇವರ ಪತ್ರ ಸಂಖ್ಯೆ: ಕೈಜಿಇ/ಅ/ಸಿ1/ಪ್ರ.ಭಾ/9/2011–12, ದಿನಾಂಕ 08–06–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ ರವರು ಶ್ರೀ ಪ್ರಶಾಂತ್ ಪಿ ಬಾರಿಗಿಡದ್, ಉಪ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ ಜಿಲ್ಲಾ ಪಂಚಾಯತ್, ಚಿತ್ರದುರ್ಗ ಇವರು 2004–05ನೇ ಸಾಲಿನಲ್ಲಿ ಕೇಂದ್ರ ಸರ್ಕಾರದ ಸಹಾಯಧನದಲ್ಲಿ ಅನುಷ್ಠಾನಗೊಳಿಸಿರುವ ಕಾರ್ಯಕ್ರಮದಲ್ಲಿ ಆಗಿರುವ ಹಣ ದುರುಪಯೋಗದ ಬಗ್ಗೆ ಸಾರ್ವಜನಿಕರು ದೂರು ಸಲ್ಲಿಸಿದ್ದು ಹಾಗೂ ಈ ಸಂಬಂಧ ಸತ್ಯಾಸತ್ಯತೆಯನ್ನು ಪರಿಶೀಲಿಸಿ, ಅಧಿಕಾರಿಯು ಗುರುತರವಾದ ನ್ಯೂನತೆಗಳು ಹಾಗೂ ಲೋಪದೋಷಗಳನ್ನು ಎಸಗಿರುವ ಬಗ್ಗೆ ಇವರ ಮೇಲಿರುವ ಆರೋಪಗಳ ಪಟ್ಟಿ, ಸಮರ್ಥನಾ ಹೇಳಿಕೆ, ದಾಖಲಾತಿ ಮತ್ತು ಸಾಕ್ಷಿಗಳ ಪಟ್ಟಿಯನ್ನು ತಯಾರಿಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಕಳುಹಿಸಿ, ಇವರ ಮೇಲೆ ಶಿಸ್ತಿನ ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರ ಸರ್ಕಾರದ ಕಾರಣ ಕೇಳುವ ನೋಟೀಸ್ ದಿನಾಂಕ 28–2–2006ರಲ್ಲಿ ಸದರಿ ಅಧಿಕಾರಿಯವರ ಮೇಲಿನ ಆರೋಪಗಳಿಗೆ ಸಂಬಂಧಿಸಿದಂತೆ ದೋಷಾರೋಪಣಾ ಪಟ್ಟಿಯನ್ನು ಅನುಬಂಧ–1 ರಿಂದ 4 ಅನ್ನು ಆರೋಪಿತ ಅಧಿಕಾರಿಗೆ ಜಾರಿ ಮಾಡಲಾಗಿರುತ್ತದೆ.

ಮೇಲೆ ಓದಲಾದ (3)ರ ಪತ್ರದಲ್ಲಿ ಸದರಿ ಅಧಿಕಾರಿಯವರು ಸರ್ಕಾರದ ಕಾರಣ ಕೇಳುವ ನೋಟೀಸಿಗೆ ಪರಿಪೂರ್ಣವಾದ ವಿವರಗಳನ್ನು ಅಗತ್ಯ ಮಾಹಿತಿ ದಾಖಲಾತಿಗಳೊಂದಿಗೆ ಲಿಖಿತ ರಕ್ಷಣಾ ಹೇಳಿಕೆಗಳನ್ನು ಸಲ್ಲಿಸುತ್ತಾ ಹಾಗೂ ಅಂಗೀಕರಿಸಿ ಇಲಾಖಾ ವಿಚಾರಣೆಯನ್ನು ನಡೆಸದೆ ಆರೋಪಗಳಿಂದ ದೋಷಮುಕ್ತಗೊಳಿಸುವಂತೆ ಕೋರಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿನಾಂಕ 28–10–2006ರ ಸರ್ಕಾರದ ಆದೇಶದಲ್ಲಿ ಆರೋಪಿತ ಅಧಿಕಾರಿಯ ಕೈಮಗ್ಗ ಮೇಳ ಕಾರ್ಯಕ್ರಮಗಳನ್ನು ನಿರ್ವಹಿಸುವಲ್ಲಿ/ಅನುಷ್ಠಾನಗೊಳಿಸುವಲ್ಲಿ ನಿಯಮಗಳನ್ನು ಪಾಲಿಸದೆ ಅಧಿಕಾರ ದುರುಪಯೋಗ ಎಸಗಿರುವುದನ್ನು ಗಮನಿಸಿ, ನಿಯಮ 11 ರಡಿಯಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಲು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯನ್ನು ನೇಮಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರಲ್ಲಿ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ಆರೋಪಿತ ಅಧಿಕಾರಿಯು ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವಿಚಾರಣಾ ವರದಿಯನ್ನು ಶಿಸ್ತುಪ್ರಾಧಿಕಾರವಾದ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (6)ರ ದಿನಾಂಕ 8–6–2011 ರ ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಕೈಮಗ್ಗ ಮತ್ತು ಜವಳಿ ಇಲಾಖೆಯ ಇವರ ಪತ್ರದಲ್ಲಿ ಸದರಿ ಆರೋಪಿತ ಅಧಿಕಾರಿಯ ಮೇಲೆ ಮೂಡಿಸಿರುವ ಆರೋಪವು ವಿಚಾರಣೆ ಸಮಯದಲ್ಲಿ ರುಜುವಾತಾಗಿಲ್ಲದ ಕಾರಣ ಈ ಆರೋಪಿಯನ್ನು ನಿರ್ದೋಶಿ ಎಂದು ನಿರ್ಧರಿಸಿ ಇವರನ್ನು ಆರೋಪದಿಂದ ಮುಕ್ತರೆಂದು ಪರಿಗಣಿಸಿ ಆದೇಶ ನೀಡಬೇಕೆಂದು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ/160/ಕೈಸೇವಿ/2005, ಬೆಂಗಳೂರು, ದಿನಾಂಕ 20–12–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಪ್ರಶಾಂತ್ ಪಿ ಬಾರಿಗಿಡದ್, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ನಿಯೋಜನೆ ಮೇರೆಗೆ ಕೈಮಗ್ಗ ಮತ್ತು ಜವಳಿ ಇಲಾಖೆ, ಜಿಲ್ಲಾ ಪಂಚಾಯತ್, ಚಿತ್ರದುರ್ಗ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಇವರ ಮೇಲೆ ಮಾಡಿರುವ ಆರೋಪಗಳು ವಿಚಾರಣಾ ವರದಿಯಲ್ಲಿ ಸಾಬೀತಾಗಿಲ್ಲದ ಕಾರಣ ಸದರಿ ಅಧಿಕಾರಿಯನ್ನು ಅವರ ಮೇಲಿನ ಅರೋಪಗಳಿಂದ ಮುಕ್ತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಲ್. ಎಸ್. ವಾಸನ್**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

ಪಿ.ಆರ್. 153

## COMMERCE AND INDUSTRIES SECRETARIAT

**Sub :** Constitution of Committee to prepare Reclamation and Rehabilitation Plan-regarding.

**Read :** Letter No. DMG/PSD/R&R/2011-12/5208, dated 05-12-2011 of Director, Department of Mines and Geology, Bangalore.

**Preamble:**

The Hon'ble Supreme Court in its Order dated 05-08-2011 and 26-08-2011 passed in S.L.A. (Civil) No. 7366-67/2010 and other connected matter, had directed the Government of Karnataka to submit Reclamation and Rehabilitation Plan (R&R) for Bellary, Chitradurga and Tumkur districts within a period of 3 months, Now, the State Government in the Department of Forest, Ecology and Environment has requested Indian Council for Forestry Research and Education to undertake the task of preparing Reclamation and Rehabilitation Plan for the above said districts. The Director, Department of Mines and Geology, in his letter read above, has recommended to constitute a Committee/Team consisting the following officers of concerned department in order to assist and provide necessary inputs to Indian Council for Forestry Research and Education in preparation of minewise R&R Plan within a time prescribed by the Apex Court:-

| | | |
|---|---|---|
| 1 | Shri Kaushik Mukherjee, Addl. Chief Secretary, Forest, Ecology and Environment Department | Chairman |
| 2 | Shri I. B. Srivastav, Principal Chief Conservator of Forests | Member |
| 3 | Shri Dipak Sarmah, Additional Principal Chief Conservator of Forests | Member |
| 4 | Shri Kanwerpal, Secretary to Government, (Environment and Ecology), Forest, Ecology and Environment Department | Member |
| 5 | Shri Nagaraj Hampole, Secretary to Government (Forest), Forest, Ecology and Environment Department | Member |
| 6 | Shri G. V. Kongawad, Secretary, Commerce and Industries Department | Member |
| 7 | Shri H. R. Srinivasa, Director, Department of Mines and Geology | Member Secretary |
| 8 | Shri Amlan Aditya Biswas, Deputy Commissioner, Bellary | Member |

The proposal has been examined in detail and decided to constitute Committee/Team. Hence, the following order:-

**Government Order No. CI 264/MMM 2011, Bangalore, dated 12-12-2011**

In the circumstances explained in the preamble, the Government is pleased to constitute a Committee/Team with the following members to get the reclamation and Rehabilitation Plan prepared for the districts of Bellary, Tumkur and Chitradurga:-

| | | |
|---|---|---|
| 1 | Shri Kaushik Mukherjee, Addl. Chief Secretary, Forest, Ecology and Environment Department | Chairman |
| 2 | Shri I. B. Srivastav, Principal Chief Conservator of Forests | Member |
| 3 | Shri Dipak Sarmah, Additional Principal Chief Conservator of Forests | Member |
| 4 | Shri Kanwerpal, Secretary to Government, (Environment and Ecology), Forest, Ecology and Environment Department | Member |
| 5 | Shri Nagaraj Hampole, Secretary to Government (Forest), Forest, Ecology and Environment Department | Member |
| 6 | Shri G. V. Kongawad, Secretary, Commerce and Industries Department | Member |
| 7 | Shri H. R. Srinivasa, Director, Department of Mines and Geology | Member Secretary |
| 8 | Shri Amlan Aditya Biswas, Deputy Commissioner, Bellary | Member |

It is the responsibility of the committee/team to assist and provide all the requisite necessary information to Indian council for Forestry Research and education and also monitor the progress made by the agency in preparing the plan.

The Indian Council for Forestry Research and education shall submit the report of Reclamation and Rehabilitation plan for the districts of Bellary, Tumkur and Chitradurga within a period of two months to the state government.

By Order and in the name of the Governor of Karnataka

**M. V. Shivasubramani**

Under Secretary to Government (Mines)

Commerce & Industries Department

P.R. 154

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

### ತಿದ್ದುಪಡಿ

ಸಂಖ್ಯೆ: ಮಮಇ 295 ಪಿಎಚ್‌ಪಿ 2011, ಬೆಂಗಳೂರು, ದಿನಾಂಕ 14–12–2011

ಸರ್ಕಾರದ ಆದೇಶ ಸಂಖ್ಯೆ: ಮಮಇ 143 ಪಿಎಚ್‌ಪಿ 2011, ದಿನಾಂಕ 22–10–2011ರ ಅನುಬಂಧದ ಬದಲಿಗೆ ಈ ತಿದ್ದುಪಡಿಗೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ಓದಿಕೊಳ್ಳತಕ್ಕದ್ದು.

ಸದರಿ ಆದೇಶದ ಭಾಗದ 11ನೇ ಕಂಡಿಕೆಯ ನಂತರ 12ನೇ ಕಂಡಿಕೆಯನ್ನು ಈ ಕೆಳಗಿನಂತೆ ಓದಿಕೊಳ್ಳತಕ್ಕದ್ದು.

"12. ನಿಗದಿಪಡಿಸಿರುವ ಅನುದಾನವನ್ನು ಮೀರದಂತೆ ಜಿಲ್ಲಾವಾರು ತಾಲ್ಲೂಕುಗಳ ಸಂಖ್ಯೆಯನ್ನು ಪರಿಶೀಲಿಸಿ ಹಂಚಿಕೆ ಮಾಡಿಕೊಳ್ಳಲು ಹಾಗೂ ಈ ಯೋಜನೆಯ ಅನುಷ್ಠಾನದಲ್ಲಿ ಅಲ್ಪಸ್ವಲ್ಪ ಮಾರ್ಪಡುಗಳಿದ್ದಲ್ಲಿ, ಆಯವ್ಯಯವನ್ನು ಮೀರದಂತೆ ಮತ್ತು ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಸೂಕ್ತ ಮಾರ್ಪಾಡು ಮಾಡಿಕೊಳ್ಳಲು ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆ ಇವರಿಗೆ ಅಧಿಕಾರ ನೀಡಲಾಗಿದೆ".

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ–2

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ತಿದ್ದುಪಡಿ ಆದೇಶ ಸಂಖ್ಯೆ: ಮಮಇ 295 ಪಿಎಚ್‌ಪಿ 2011, ದಿನಾಂಕ 14–12–2011ಕ್ಕೆ ಅನುಬಂಧ**

| | | |
|---|---|---|
| 1 | ತರಬೇತಿ ಮಾರ್ಗಸೂಚಿಯನ್ನು ತಯಾರಿಸಲು ತಗಲುವ ವೆಚ್ಚ (ಸಾಮಗ್ರಿಗಳು ಹಾಗೂ ಮಾರ್ಗದರ್ಶಿ ಪುಸ್ತಕ ಜೊತೆ ಒಂದಕ್ಕೆ ರೂ. 250/– ರಂತೆ ಒಟ್ಟು 350 ಜೊತೆಗೆ) | 87,500 |
| 2 | ಒಂದು ದಿನದ ರಾಜ್ಯ ಮಟ್ಟದ ಸಜ್ಜುಗೊಳಿಸುವಿಕೆ ಭಗವಹಿಸುವ ಒಟ್ಟು ಸದಸ್ಯರ ಸಂಖ್ಯೆ – 105 | |
| | ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು – 30 | |
| | ಸ್ವಯಂ ಸೇವಾ ಸಂಸ್ಥೆಗಳ ಪ್ರತಿನಿಧಿಗಳು ಜಿಲ್ಲೆಗೆ ಇಬ್ಬರಂತೆ – 60 | |
| | ಕೇಂದ್ರ ಕಛೇರಿಯ ಸಿಬ್ಬಂದಿ – 15 | |
| | ತರಬೇತಿ ಕೇಂದ್ರದ ಬಾಡಿಗೆ ಮೈಕ್ ಸೆಟ್‌ನೊಂದಿಗೆ | 25,000 |
| | ಊಟ ಮತ್ತು ಲಘು ಉಪಹಾರ ಒಬ್ಬರಿಗೆ ರೂ. 125 ರಂತೆ | 13,125 |
| | ಲೇಖನ ಸಾಮಗ್ರಿಗಳು ಒಬ್ಬರಿಗೆ ರೂ. 70 ರಂತೆ | 7,350 |
| | ಪ್ರಯಾಣ ಭತ್ಯ (ಭರಿಸಿರುವ ದರದಂತೆ) | 46,900 |
| | ಸಂಪನ್ಮೂಲ ವ್ಯಕ್ತಿಗಳಿಗೆ ಗೌರವಧನ (ಒಬ್ಬರಿಗೆ ರೂ. 1000/ರಂತೆ ಐದು ಜನರಿಗೆ | 5,000 |
| 3 | ಸ್ವಸಹಾಯ ಸಂಘದ ಸದಸ್ಯರಿಗೆ ಹಾಗೂ ಅವರ ಪೋಷಕರಿಗೆ ಪ್ರೇರೇಪಣಾ ತರಬೇತಿ – ರೂ. 100X02 ದಿನX3700 ಸದಸ್ಯರಿಗೆ | 7,40,000 |
| 4 | ಗುಂಪಿಗೆ ಈಡಲಾಗುವ ಲೇಖಿನ ಸಾಮಗ್ರಿ ಹಾಗೂ ಪೆಟ್ಟಿಗೆಗಳ ಖರೀದಿಗೆ (ರೂ. 1000X147 ಗುಂಪುಗಳು | 1,47,000 |
| 5 | ಸ್ವಸಹಾಯ ಗುಂಪುಗಳಿಗೆ ಸ್ಥಳೀಯವಾಗಿ ಕೌಶಲ್ಯ ತರಬೇತಿ (12 ದಿನಗಳು X 1752 ಸದಸ್ಯರು X ರೂ. 50) | 10,51,200 |
| 6 | ಅಂಗವಿಕಲರ ಹಕ್ಕುಗಳನ್ನು ತಿಳಿಯಲು ಹಾಗೂ ಅವರ ಸಾಮರ್ಥ್ಯ ಬೆಳವಣಿಗೆಗೆ ಅಂಗವಿಕಲತೆ ಇರುವ ತಾಲ್ಲೂಕಿಗೆ 10 ಅಂಗವಿಕಲ ಸದಸ್ಯರಂತೆ 147 ತಾಲ್ಲೂಕುಗಳ 1470 ಸದಸ್ಯರಿಗೆ ಒಂದು ದಿನದ ತರಬೇತಿಗೆ (ರೂ. 50 ದಿನ X 1 ದಿನ X ರೂ. 1470 ಸದಸ್ಯರಿಗೆ) | 73,500 |
| 7 | ಜಿಲ್ಲಾ ಸಂಪನ್ಮೂಲ ತಂಡಗಳ ಒಂದು ದಿನದ ತರಬೇತಿಗೆ (ರೂ. 200 X 1 ದಿನ X 60 ಸದಸ್ಯರಿಗೆ) (ಜಿಲ್ಲೆಗೆ ಇಬ್ಬರಂತೆ 30 ಜಿಲ್ಲೆಗಳಿಗೆ) | 12,000 |
| 8 | ಸ್ವಸಹಾಯ ಗುಂಪುಗಳು ಹಾಗೂ ಕಿರುಸಾಲಕ್ಕೆ ಸಮಾಲೋಚಕ ನೆರವಿಗೆ ಜಿಲ್ಲಾ ಮಟ್ಟದ ಒಂದು ದಿನದ ತರಬೇತಿಗೆ (147 ಗುಂಪಿನ ಸದಸ್ಯರಿಗೆ ಉಪಹಾರ, ಪ್ರಯಾಣ ಭತ್ಯೆ ಹಾಗೂ ಸಮಾಲೋಚಕರ ಗೌರವಧನ) | 50,000 |
| 9 | ಸ್ವಯಂ ಸೇವಾ ಸಂಸ್ಥೆಗೆ ಮಾರ್ಗದರ್ಶಕರು ಹಾಗೂ ಪ್ರಯಾಣ ಭತ್ಯೆ ಜಿಲ್ಲೆಗೆ ಒಬ್ಬ ಸಂಚಾಲಕರು/ಮಾರ್ಗದರ್ಶಿ (ರೂ. 6000 ಗೌರವ ಧನ + 1000 ಪ್ರಯಾಣ ಭತ್ಯೆ) X 6 ತಿಂಗಳು X 30 ಜಿಲ್ಲೆಗಳು) | 12,60,000 |
| 10 | ಯೋಜನೆಯನ್ನು ಅನುಷ್ಠಾನಗೊಳಿಸುತ್ತಿರುವ 147 ತಾಲ್ಲೂಕುಗಳಲ್ಲಿ ಎಂ.ಆರ್.ಡಬ್ಲ್ಯೂ/ವಿ.ಆರ್.ಡಬ್ಲ್ಯೂಗಳನ್ನು ಆಯ್ಕೆ ಮಾಡುವುದು ಹಾಗೂ ಗೌರವಧನವನ್ನು ಹಂಚುವುದು. (6 ತಿಂಗಳು X 30 ಜಿಲ್ಲೆಗಳು) | 10,80,000 |
| 11 | ಜಿಲ್ಲಾ ಮಟ್ಟದಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಕಛೇರಿ ನಿರ್ವಹಣೆ ವೆಚ್ಚ (ರೂ. 5500X1 30 ಜಿಲ್ಲೆಗಳುX 6 ತಿಂಗಳು) | 9,90,000 |
| 12 | ಸುತ್ತು ನಿಧಿ (ಒಂದು ಗುಂಪಿಗೆ ರೂ. 25,000 X 147 ಗುಂಪುಗಳು) | 36,75,000 |
| 13 | ಮಾರುಕಟ್ಟೆ ಸೌಲಭ್ಯಕ್ಕಾಗಿ (ಒಂದು ಗುಂಪಿಗೆ ರೂ. 5,000 X 147 ಗುಂಪುಗಳು | 7,35,000 |
| | **ಒಟ್ಟು ರೂ.** | **99,98,575** |

**ಬಿ. ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ–2

ಪಿ.ಆರ್. 155

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಉಮೇಶ್ ಡಿ., ಕ್ಷ–ಕಿರಣ ತಂತ್ರಜ್ಞರು, ಜಿಲ್ಲಾ ಮೆಗ್ಗಾನ್ ಆಸ್ಪತ್ರೆ, ಶಿವಮೊಗ್ಗ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆಕುಕ ಸೇವೆಗಳು ಇವರ ಪತ್ರ ಸಂಖ್ಯೆ: ಡಿಪಿಡಿ/ಬೆಂವಿ11/ಶಿ/30/08–09, ದಿನಾಂಕ 03–02–2011.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 03–02–2011ರ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪ್ರಸ್ತಾವನೆಯಲ್ಲಿ ಡಾ॥ ಉಮೇಶ್ ಡಿ, ಕ್ಷ–ಕಿರಣ ತಂತ್ರಜ್ಞರು, ಜಿಲ್ಲಾ ಮೆಗ್ಗಾನ್ ಆಸ್ಪತ್ರೆ, ಶಿವಮೊಗ್ಗ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ದಿನಾಂಕ 04–10–2007 ರಿಂದ 02–03–2008 ವರೆಗೆ ಅನಾರೋಗ್ಯದ ನಿಮಿತ್ತ 151 ದಿನಗಳು ಗಳಿಕೆ ರಜೆ ಕೋರಿದ್ದು, ರಜೆ ಮುಗಿದ ನಂತರ ದಿನಾಂಕ 03–03–2008 ರಂದು ಕರ್ತವ್ಯಕ್ಕೆ ಹಾಜರಾಗದೆ ಅನಧಿಕೃತ ಗೈರು ಹಾಜರಿ ಆಗಿದ್ದು, ಸದರಿ ಅನಧಿಕೃತ ಗೈರು ಹಾಜರಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆಯನ್ನು ಕೈಗೊಂಡಿದ್ದು ಇಲಾಖಾ ವಿಚಾರಣೆಗೆ ಹಾಜರಾಗದೆ ಇದ್ದುದರಿಂದ ಪತ್ರಿಕಾ ಪ್ರಕಟಣೆ ನೀಡಿದಾಗ್ಯೂ ಯಾವುದೇ ಪ್ರತಿಫಲ ದೊರೆಯದೇ ಇದ್ದುದರಿಂದ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿ ಅಪಾದಿತ ವೈದ್ಯರ ಮೇಲಿನ ಅನಧಿಕೃತ ಗೈರು ಹಾಜರಾಗಿರುವ ಆರೋಪವು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆಂದು ತಿಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಡಾ॥ ಉಮೇಶ್ ಡಿ. ಕ್ಷ–ಕಿರಣ ತಂತ್ರಜ್ಞರು, ಜಿಲ್ಲಾ ಮೆಗ್ಗಾನ್ ಆಸ್ಪತ್ರೆ, ಶಿವಮೊಗ್ಗ ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳ ನಿಯಮ 8(3)ರಡಿ ಸರ್ಕಾರಿ ಸೇವೆಯಿಂದ ವಜಾಗೊಳಿಸಲು ಕೋರಿರುತ್ತಾರೆ.

ಮುಖ್ಯ ಆಡಳಿತಾಧಿಕಾರಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಸರ್ಕಾರಕ್ಕೆ ಬರೆದ ಪತ್ರ ದಿನಾಂಕ 03–01–2011ರಲ್ಲಿ ಡಾ॥ ಉಮೇಶ್ ಡಿ, ಕ್ಷ–ಕಿರಣ ತಂತ್ರಜ್ಞರು, ಜಿಲ್ಲಾ ಮೆಗ್ಗಾನ್ ಆಸ್ಪತ್ರೆ, ಶಿವಮೊಗ್ಗ ಇವರು ದಿನಾಂಕ 25–08–2007ರಲ್ಲಿ ರಾಜೀನಾಮೆ ಸಲ್ಲಿಸಿದ್ದು, ತಮಗೆ ಸರ್ಕಾರದಿಂದ ಸವಲತ್ತುಗಳ ಅವಶ್ಯಕತೆ ಮತ್ತು ಬೇಡಿಕೆ ಇರುವುದಿಲ್ಲವೆಂದು ವಿಚಾರಣಾ ಸಮಯದಲ್ಲಿ ತಿಳಿಸಿರುವುದಾಗಿ ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಡಾ॥ ಉಮೇಶ್ ಡಿ, ಕ್ಷ–ಕಿರಣ ತಂತ್ರಜ್ಞರು, ಜಿಲ್ಲಾ ಮೆಗ್ಗಾನ್ ಆಸ್ಪತ್ರೆ, ಶಿವಮೊಗ್ಗ ಇವರು ಸರ್ಕಾರದ ಆದೇಶ ಸಂಖ್ಯೆ: ಆಕುಕ 648 ಹೆಚ್ಎಸ್ಹೆಚ್ 2002, ದಿನಾಂಕ 24–08–2002ರಲ್ಲಿ ನೇಮಕ ಹೊಂದಿ ದಿನಾಂಕ 09–09–2002 ರಿಂದ ಕಾರ್ಯ ನಿರ್ವಹಿಸುತ್ತಿದ್ದಾರೆ. ಸದರಿ ವೈದ್ಯಾಧಿಕಾರಿಯವರು ದಿನಾಂಕ 25–08–2007 ರಂದು ಆಡಳಿತ ವೈದ್ಯಾಧಿಕಾರಿ ಸಾರ್ವಜನಿಕ ಆಸ್ಪತ್ರೆ, ಕುಣಿಗಲ್, ತುಮಕೂರು ಜಿಲ್ಲೆ ಇವರಿಗೆ ಹಾಗೂ ದಿನಾಂಕ 13–11–2007 ಮತ್ತು 13–07–2009ರಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರಿಗೆ ಮನವಿಯನ್ನು ಸಲ್ಲಿಸಿ ವೈಯಕ್ತಿಕ ಕಾರಣಗಳಿಂದಾಗಿ ಸೇವೆಯಲ್ಲಿ ಮುಂದುವರೆಯಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿ ಕೆಲಸಕ್ಕೆ ದಿನಾಂಕ 25–08–2007 ರಂದು ರಾಜೀನಾಮೆಯನ್ನು ಸಲ್ಲಿಸಿರುವುದಾಗಿ ಮತ್ತು ತಮ್ಮ ರಾಜೀನಾಮೆಯನ್ನು ಅಂಗೀಕರಿಸುವಂತೆ ಕೋರಿರುತ್ತಾರೆ.

ಆದುದರಿಂದ ಸದರಿಯವರ ಮನವಿಯನ್ನು ಪರಿಗಣಿಸಿ ದಿನಾಂಕ 13–07–2009 ರಿಂದ ಜಾರಿಗೆ ಬರುವಂತೆ ರಾಜೀನಾಮೆಯನ್ನು ಅಂಗೀಕರಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಕುಕ 38 ಎಂಎಸ್ಎ 2011, ಬೆಂಗಳೂರು, ದಿನಾಂಕ 08–12–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಡಾ॥ ಉಮೇಶ್ ಡಿ. ಕ್ಷ–ಕಿರಣ ತಂತ್ರಜ್ಞರು, ಜಿಲ್ಲಾ ಮೆಗ್ಗಾನ್ ಆಸ್ಪತ್ರೆ, ಶಿವಮೊಗ್ಗ ಇವರು ವೈಯಕ್ತಿಕ ಕಾರಣದಿಂದ ವೈದ್ಯಾಧಿಕಾರಿಯ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ದಿನಾಂಕ 13–07–2009 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸರ್ಕಾರವು ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಎಫ್. ಹುಬ್ಬಳ್ಳಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

ಪಿ. ಆರ್. 156

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಸರ್ಕಾರಿ ನೌಕರರು ಮತ್ತು ಅವರ ಅವಲಂಬಿತರು ನಗದು ರಹಿತವಾಗಿ ವೈದ್ಯಕೀಯ ಚಿಕಿತ್ಸೆಯನ್ನು ಪಡೆಯಲು ಯೋಜನೆಯನ್ನು ರೂಪಿಸಿ ಕಾರ್ಯ ನಿರ್ವಹಿಸಲು ಸಿ.ಆ.ಸು. ಇಲಾಖೆಯಲ್ಲಿ ಪೂರಕ ಸಿಬ್ಬಂದಿಯೊಂದಿಗೆ ಜಂಟಿ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** ಅನಧಿಕೃತ ಟಿಪ್ಪಣಿ ಸಂಖ್ಯೆ: ಡಿಪಿಎಆರ್ 1 ಎಸ್ಎಂಆರ್ 2005, ದಿನಾಂಕ 18–11–2011

**ಪ್ರಸ್ತಾವನೆ :**

ಮೇಲೆ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ 14–06–2011 ರಂದು ನಡೆದ ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿ ಸಭೆಯಲ್ಲಿ ಈಗಾಗಲೇ ಪೊಲೀಸ್ ಇಲಾಖೆಯ **"ಆರೋಗ್ಯ ಭಾಗ್ಯ ಯೋಜನೆ"** ಹಾಗೂ ಸಹಕಾರ ಇಲಾಖೆಯ **"ಯಶಸ್ವಿನಿ ಯೋಜನೆ"ಗಳಂತೆ** ಎಲ್ಲಾ ರಾಜ್ಯ ಸರ್ಕಾರಿ ನೌಕರರಿಗೂ ನಗದು ರಹಿತ ಚಿಕಿತ್ಸೆಯ ಯೋಜನೆಯನ್ನು ರೂಪಿಸಲು ಸರ್ಕಾರ ತೀರ್ಮಾನಿಸಿದ್ದು, ಇಂತಹ ಯೋಜನೆಯೊಂದನ್ನು ಜಾರಿಗೊಳಿಸಲು ಸ್ಥಾಪಿತವಾಗಿರುವ ಕರ್ನಾಟಕ ಗವರ್ನ್‌ಮೆಂಟ್ ಹೆಲ್ತ್ ವೆಲ್‌ಫೇರ್ ಟ್ರಸ್ಟ್‌ನ ಆಡಳಿತವನ್ನು ಸಮರ್ಪಕವಾಗಿ ನಿರ್ವಹಿಸುವ ಸಲುವಾಗಿ ಸಚಿವಾಲಯದ ಮಟ್ಟದಲ್ಲಿ ಒಂದು ಜಂಟಿ ಕಾರ್ಯದರ್ಶಿ ಒಂದು ಶೀಘ್ರಲಿಪಿಗಾರ, ಒಂದು ಕಿರಿಯ ಸಹಾಯಕ ಮತ್ತು ಒಂದು ದಲಾಯತ್ ಹೀಗೆ ಒಟ್ಟು 4 ಹುದ್ದೆಗಳನ್ನು ಸೃಜಿಸಲು ತೀರ್ಮಾನಿಸಿದ್ದು, ಈ ಪ್ರಸ್ತಾವನೆಗೆ ಈಗಾಗಲೇ ಆರ್ಥಿಕ ಇಲಾಖೆ ತನ್ನ ಸಹಮತಿ ನೀಡಿರುತ್ತದೆ. ಅದೇ ರೀತಿ ಈ ಪ್ರಸ್ತಾವನೆಗೆ ಮಾನ್ಯ ಮುಖ್ಯಮಂತ್ರಿಗಳು ಅನುಮೋದಿಸಿರುತ್ತಾರೆ. ಅದರಂತೆ ಕೂಡಲೇ ಸೂಕ್ತ ಸರ್ಕಾರಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಅದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 572 ಸಅಸೇ 2011, ಬೆಂಗಳೂರು, ದಿನಾಂಕ 14-12-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪೋಲೀಸ್ ಇಲಾಖೆಯ **"ಆರೋಗ್ಯ ಭಾಗ್ಯ ಯೋಜನೆ"** ಹಾಗೂ ಸಹಕಾರ ಇಲಾಖೆಯ **"ಯಶಸ್ವಿನಿ ಯೋಜನೆ"**ಗಳಂತೆ ಎಲ್ಲ ರಾಜ್ಯ ಸರ್ಕಾರಿ ನೌಕರರಿಗೂ ನಗದು ರಹಿತ ಚಿಕಿತ್ಸೆ ಒದಗಿಸುವ ಯೋಜನೆಯೊಂದನ್ನು ರೂಪಿಸಲು ಸ್ಥಾಪಿತವಾಗಿರುವ **ಕರ್ನಾಟಕ ಗವರ್ನ್‌ಮೆಂಟ್ ಹೆಲ್ತ್ ವೆಲ್‌ಫೇರ್ ಟ್ರಸ್ಟ್‌ನ** ಆಡಳಿತವನ್ನು ಸಮರ್ಪಕವಾಗಿ ನಿರ್ವಹಿಸುವ ಸಲುವಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸಚಿವಾಲಯದ ಸಿ.ಆ.ಸು. ಇಲಾಖೆಯಲ್ಲಿ ವ್ಯಾಪ್ತಿಯ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಿ ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಸರ್ಕಾರದ ಜಂಟಿ ಕಾರ್ಯದರ್ಶಿ | 1 |
| 2 | ಶೀಘ್ರಲಿಪಿಗಾರರು | 1 |
| 3 | ಕಿರಿಯ ಸಹಾಯಕ | 1 |
| 4 | ದಲಾಯತ್ | 1 |
| | ಒಟ್ಟು | 4 |

ಈ ಆದೇಶವನ್ನು ಸಿ.ಆ.ಸು. ಇಲಾಖೆಯ ಕಡತ ಸಂಖ್ಯೆ ಸಿಆಸುಇ 1 ಎಸ್‌ಎಂಆರ್ 2005ರಲ್ಲಿ ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂಖ್ಯೆ ಆಇ 805 ವೆಚ್ಚ 12/2011, ದಿನಾಂಕ 31-10-2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ. ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ. ಆರ್. 157 ಸಿ.ಆ.ಸು. ಇಲಾಖೆ (ಸೇವೆಗಳು-3)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀಮತಿ ಸಿ. ಕೆ. ಶ್ರೀವಾಣಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ. ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಸಿಂಧಗಿ (ಹಿಂದಿನ ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಸಿ.ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಗೌರಿಬಿದನೂರು, ಚಿಕ್ಕಬಳ್ಳಾಪುರ ಜಿಲ್ಲೆ) ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ :**
1) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ರವರ ಆದೇಶ ಸಂಖ್ಯೆ: ಡಿಪಿಎನ್.ಸಿಶಾ1-ಎ/74/2010-11, ದಿನಾಂಕ 26-10-2010.
2) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ (ಜಿ)/ಬಿಡಿ-64/ಸಿಆರ್-12/2010, ಚಿಕ್ಕಬಳ್ಳಾಪುರ, ದಿನಾಂಕ 20-07-2011.
3) ತನಿಖಾಧಿಕಾರಿಯ ವರದಿ ದಿನಾಂಕ 27-06-2011
4) ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಸ್ವತ್ತುಗಳ ಪಟ್ಟಿ ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ :**

ಶ್ರೀಮತಿ ಸಿ. ಕೆ. ಶ್ರೀವಾಣಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ. ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸಿಂಧಗಿ ಇವರು ಸಿ. ಜೆ. ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಗೌರಿಬಿದನೂರು, ಚಿಕ್ಕಬಳ್ಳಾಪುರ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ 23-10-2011 ರಂದು ಗೌರಿಬಿದನೂರು ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯದ ಸಿ.ಸಿ. ಸಂಖ್ಯೆ: 522/2009ರಲ್ಲಿ ದಾಖಲಾದ ಪ್ರಕರಣದಲ್ಲಿ ಫಿರ್ಯಾದುದಾರರಾದ ಶ್ರೀ ಶಿವಕುಮಾರ್ ಅವರಿಂದ ರೂ. 3,000/- (ಮೂರು ಸಾವಿರಗಳು) ಲಂಚವನ್ನು ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತ ಪೊಲೀಸರ ಬಲೆಗೆ ಸಿಕ್ಕಿದ್ದರಿಂದ ಮೇಲೆ ಓದಲಾದ (1)ರ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಆದೇಶದಲ್ಲಿ ದಿನಾಂಕ 23-10-2010 ರಿಂದ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

ಶ್ರೀಮತಿ ಸಿ. ಕೆ. ಶ್ರೀವಾಣಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸಿಂಧಗಿ ಇವರು ಸಿ.ಜೆ. ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಗೌರಿಬಿದನೂರು, ಚಿಕ್ಕಬಳ್ಳಾಪುರ ಜಿಲ್ಲೆ ಇವರ ವಿರುದ್ಧ ಚಿಕ್ಕಬಳ್ಳಾಪುರ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ದಾಖಲಾಗಿರುವ ಮೊಕದ್ದಮೆ ಸಂಖ್ಯೆ: 12/2010ರ ಟ್ರ್ಯಾಪ್ ಪ್ರಕರಣದಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಲಂಚ ನಿರೋಧಕ ಕಾಯ್ದೆ 1988ರ ಅಡಿಯಲ್ಲಿ ಕರ್ನಾಟಕ ಲೋಕಾಯುಕ್ತ ಚಿಕ್ಕಬಳ್ಳಾಪುರ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯು ಅಂತಿಮ ವರದಿ ಮತ್ತು ತನಿಖಾ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು ಮೇಲೆ ಓದಲಾದ (3)ರ ಪತ್ರದೊಂದಿಗೆ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ (2)ರ ಪತ್ರದ ಜೊತೆ ಕಳುಹಿಸುತ್ತಾ ಆಪಾದಿತೆಯನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ 1988 ಕಲಂ 7, 13(1)(ಡಿ) ರ ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19(1)(ಬಿ)ರನ್ವಯ ಮಂಜೂರಾತಿ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ (2)ರ ಪತ್ರ ದಿನಾಂಕ 20-07-2011ರೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1) ಶ್ರೀ ಎನ್. ವಿ. ಶಿವಕುಮಾರ್, ಬಿನ್ ಲೇಟ್ ವೀರಣ್ಣ, 30 ವರ್ಷ, ವಕ್ಕಲಿಗರು, ನಾಗತೇನಹಳ್ಳಿ ತರಿಧಾಳು ಮಜರಾ, ಗೌರಿಬಿದನೂರು ತಾಲ್ಲೂಕು ಚಿಕ್ಕಬಳ್ಳಾಪುರ ಜಿಲ್ಲೆ ದಿನಾಂಕ 23-10-2010.
2) ಪ್ರಥಮ ವರ್ತಮಾನ ವರದಿ, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಗೌರಿಬಿದನೂರು, ಚಿಕ್ಕಬಳ್ಳಾಪುರ ಜಿಲ್ಲೆಯ ಪ್ರಕರಣದ ಸಂಖ್ಯೆ: 12/2008.
3) ಪ್ರಾಯೋಗಿಕ ಪಂಚನಾಮೆ ದಿನಾಂಕ 23-10-2010
4) ಟ್ರ್ಯಾಪ್‌ಮಹಜರ್ ದಿನಾಂಕ 23-10-2010
5) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: ಪಿಹೆಚ್‌ಐ/ಸಿಎಂಇ/ಲೋಕ್/132/10-11, ದಿನಾಂಕ 30-11-2010.
6) ಕೃತ್ಯ ನಡೆದ ಸ್ಥಳದ ನಕಾಶೆ

**ಸಾಕ್ಷಿಗಳ ಹೇಳಿಕೆಗಳು:**

1) ಶ್ರೀ ಎನ್. ವಿ. ಶಿವಕುಮಾರ್, ಬಿನ್ ಲೇಟ್ ವೀರಣ್ಣ, 30 ವರ್ಷ, ವಕ್ಕಲಿಗರು, ನಾಗತೇನಹಳ್ಳಿ ತರಿಧಾಳು ಮಜರಾ, ಗೌರಿಬಿದನೂರು ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ.
2) ಶ್ರೀ ಸಿ. ಆರ್. ಮಂಜುನಾಥ್, ಬಿನ್ ರಾಜಣ್ಣ, 31 ವರ್ಷ, ಜೂನಿಯರ್ ಅಸಿಸ್ಟೆಂಟ್, ಕೆ.ಎಸ್.ಆರ್.ಟಿ.ಸಿ. ಡಿಪೋ, ಚಿಕ್ಕಬಳ್ಳಾಪುರ ನಗರ ವಾಸ: ಬಸವೇಶ್ವರ ನಿಲಯ, ದಿನ್ನೇಹೊಸಹಳ್ಳಿ ರಸ್ತೆ, ಪ್ರಶಾಂತನಗರ, ಚಿಕ್ಕಬಳ್ಳಾಪುರ ನಗರ, ಸ್ವಂತ ಗ್ರಾಮ/ದೊಡ್ಡಬಳ್ಳಾಪುರ ಟೌನ್.
3) ಶ್ರೀ ವಿ. ರಾಮಕೃಷ್ಣ ಬಿನ್ ವೆಂಕಟರಾಯಪ್ಪ, 51 ವರ್ಷ, ದ್ವಿತೀಯ ದರ್ಜೆ ಸಹಾಯಕರು, ಲೋಕೋಪಯೋಗಿ ಇಲಾಖೆ, ಚಿಕ್ಕಬಳ್ಳಾಪುರ ನಗರ, ವಾಸ:ಪಿ.ಡಬ್ಲ್ಯೂಡಿ, ವಸತಿ ಗೃಹಗಳು, ಎಸ್.ಸಿ/ಎಸ್.ಟಿ. ಹಾಸ್ಟೆಲ್ ಎದುರು, ಎಂ. ಜಿ. ರಸ್ತೆ, ಚಿಕ್ಕಬಳ್ಳಾಪುರ ನಗರ.
4) ಶ್ರೀಮತಿ ಪದ್ಮಾವತಮ್ಮ ಕೋಂ ಎಂ.ಇ. ಸಣ್ಣ ನಾಗಪ್ಪ, 33 ವರ್ಷ, ಗೌರಿಬಿದನೂರು ಘನ ಪ್ರಧಾನ ಸಿ. ಜೆ. ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯದ ಎ.ಪಿ.ಪಿ. ಕಛೇರಿ ಟೈಪಿಸ್ಟ್, ವಾಸ: ಮನೆ ನಂ. 32, ಪಿಡಬ್ಲ್ಯೂಡಿ ವಸತಿ ಗೃಹಗಳು, ಮಧುಗಿರಿ, ತುಮಕೂರು ಜಿಲ್ಲೆ.
5) ಶ್ರೀ ಎ. ಆನಂದರಾವ್ ಬಿನ್ ಲೇಟ್ ನಾರಾಯಣರಾವ್, 51 ವರ್ಷ, ಬ್ರಾಹ್ಮಣರು, ಅಟೆಂಡರ್ ಕೆಲಸ, ವಾಸ:ವಿನಾಯಕ ನಗರ, ಸರ್ಕಾರಿ ಕಾಲೇಜ್ ಹಿಂಭಾಗ, ಗೌರಿಬಿದನೂರು ಟೌನ್.
6) ಶ್ರೀ ಎಸ್. ಶೂಲಪಾಣಿ ಬಿನ್ ಎಂ. ಎನ್. ಸುಬ್ಬಣ್ಣ, 44 ವರ್ಷ, ಕುಂಬಾರರು, ಜಿರಾಯ್ತಿ, ಮಲ್ಲಸಂದ್ರ ಗ್ರಾಮ, ತೊಂಡೆಭಾವಿ ಹೋಬಳಿ, ಗೌರಿಬಿದನೂರು ತಾಲ್ಲೂಕು.
7) ಶ್ರೀಮತಿ ರಂಗಮ್ಮ ಕೋಂ ವೀರಣ್ಣ, 53 ವರ್ಷ, ವಕ್ಕಲಿಗರು, ಜಿರಾಯ್ತಿ, ತರಿಧಾಳು ಮಜರಾ ನಾಗತೇನಹಳ್ಳಿ ಗ್ರಾಮ, ತೊಂಡೇಭಾವಿ ಹೋಬಳಿ, ಗೌರಿಬಿದನೂರು ತಾಲ್ಲೂಕು.
8) ಶ್ರೀ ಪುಟ್ಟರುದ್ರಯ್ಯ, ಬಿನ್ ಲೇಟ್ ದೊಡ್ಡಮಲ್ಲಯ್ಯ, 52 ವರ್ಷ, ವಕ್ಕಲಿಗರು, ಜಿರಾಯ್ತಿ, ತರಿದಾಳು ಮಜರಾ ನಾಗತೇನಹಳ್ಳಿಗ್ರಾಮ, ತೊಂಡೇಭಾವಿ ಹೋಬಳಿ, ಗೌರಿಬಿದನೂರು ತಾಲ್ಲೂಕು.
9) ಶ್ರೀ ಎಸ್. ಕುಮಾರ್, ಜೂನಿಯರ್ ಇಂಜಿನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲ ಸಾರಿಗೆ ಇಲಾಖೆ, ಉಪ ವಿಭಾಗ, ಗೌರಿಬಿದನೂರು, ಚಿಕ್ಕಬಳ್ಳಾಪುರ ಜಿಲ್ಲೆ.
10) ಶ್ರೀ ಜಿಕ್ರಿಯಾ ಬಿನ್ ಇಸ್ಮಾಯಿಲ್, 33 ವರ್ಷ, ಮುಸ್ಲಿಂ ಜನಾಂಗ, ಸಿ.ಪಿ.ಸಿ. 308, ನ್ಯಾಯಾಲಯ ಕರ್ತವ್ಯ ನಿರ್ವಹಣೆ, ಗೌರಿಬಿದನೂರು ಟೌನ್ ಪೊಲೀಸ್ ಠಾಣೆ, ಪೊಲೀಸ್ ವಸತಿ ಗೃಹಗಳು, ಗೌರಿಬಿದನೂರು ಟೌನ್, ಸ್ವಂತ ಗ್ರಾಮ:ದಿಗುವನಟ್ಟಿಕುಂಟಿಪಲ್ಲಿ, ಸೋಮನಾಥಪುರ ಪೋಸ್ಟ್, ಚೇಳೂರು ಹೋಬಳಿ, ಬಾಗೇಪಲ್ಲಿ ತಾಲ್ಲೂಕು.
11) ಶ್ರೀ ಎ. ಖಲಂದರ್ ಷರೀಫ್ ಬಿನ್ ಅಬ್ದುಲ್ ಸಲಾಂ, 32 ವರ್ಷ, ಮುಸ್ಲಿಂ ಜನಾಂಕ ಸಿ.ಪಿ.ಸಿ. 261, ನ್ಯಾಯಾಲಯ ಕರ್ತವ್ಯ ನಿರ್ವಹಣೆ, ಮಂಚೇನಹಳ್ಳಿ ಪೊಲೀಸ್ ಠಾಣೆ, ಸ್ವಂತ ಗ್ರಾಮ:ಮಾದವನಗರ,ಗೌರಿಬಿದನೂರು ಟೌನ್.
12) ಶ್ರೀ ಎಂ. ಮಲ್ಲಪ್ಪ ಬಿನ್ ಆಂಜಿನಪ್ಪ 58 ವರ್ಷ, ಸಹಾಯಕ ಪೊಲೀಸ್ ಸಬ್‌ಇನ್ಸ್‌ಪೆಕ್ಟರ್, ಗೌರಿಬಿದನೂರು ಪುರ ಠಾಣೆ, ಸ್ವಂತ ಗ್ರಾಮ:ಮುದಿಗೆರೆ, ಬಂಗಾರಪೇಟೆ ತಾಲ್ಲೂಕು, ಕೋಲಾರ ಜಿಲ್ಲೆ.
13) ಶ್ರೀ ವಿ. ಹರೀಶ್, ಎ.ಪಿ.ಸಿ. 48, ಡಿ.ಎ.ಆರ್. ಚಿಕ್ಕಬಳ್ಳಾಪುರ ಒ.ಒ.ಡಿ. ಕರ್ನಾಟಕ ಲೋಕಾಯುಕ್ತ, ಚಿಕ್ಕಬಳ್ಳಾಪುರ.
14) ಶ್ರೀ ಹೆಚ್. ಆರ್. ಮಲ್ಲಿಕಾರ್ಜುನ, ಸಿ.ಪಿ.ಸಿ. ಕರ್ನಾಟಕ ಲೋಕಾಯುಕ್ತ, ಚಿಕ್ಕಬಳ್ಳಾಪುರ
15) ಶ್ರೀಮತಿ ಮುಬೀನ್ ತಾಜ್, ಮಹಿಳಾ ಪಿ.ಸಿ. ಪಾತಪಾಳ್ಯ ಪೊಲೀಸ್ ಠಾಣೆ, ಹಾಲಿ ಒ.ಒ.ಡಿ ಕರ್ನಾಟಕ ಲೋಕಾಯುಕ್ತ, ಚಿಕ್ಕಬಳ್ಳಾಪುರ.
16) ಶ್ರೀ ಚಂದ್ರಶೇಖರ್ ಎ.ಪಿ.ಸಿ., ಡಿ.ಎ.ಆರ್., ಚಿಕ್ಕಬಳ್ಳಾಪುರ, ಒ.ಒ.ಡಿ ಕರ್ನಾಟಕ ಲೋಕಾಯುಕ್ತ, ಚಿಕ್ಕಬಳ್ಳಾಪುರ
17) ಶ್ರೀ ಎಂ. ಶಂಕರಪ್ಪ, ಸಿ.ಪಿ.ಸಿ. ಕರ್ನಾಟಕ ಲೋಕಾಯುಕ್ತ, ಚಿಕ್ಕಬಳ್ಳಾಪುರ
18) ಶ್ರೀ ಇ. ಪಿ. ಜನಾರ್ಧನ್, ಸಿ.ಪಿ.ಸಿ. ಕರ್ನಾಟಕ ಲೋಕಾಯುಕ್ತ, ಚಿಕ್ಕಬಳ್ಳಾಪುರ
19) ಶ್ರೀ ಜಿ. ರಾಮಾಚಾರ್, ಸಿ.ಹೆಚ್.ಸಿ. ಕರ್ನಾಟಕ ಲೋಕಾಯುಕ್ತ, ಚಿಕ್ಕಬಳ್ಳಾಪುರ ಜಿಲ್ಲೆ
20) ಶ್ರೀ ಕೆ. ವಿ. ಶಿವಶಂಕರ್, ಎ.ಹೆಚ್.ಸಿ.ಡಿ.ಎ.ಆರ್., ಚಿಕ್ಕಬಳ್ಳಾಪುರ, ಒ.ಒ.ಡಿ. ಕರ್ನಾಟಕ ಲೋಕಾಯುಕ್ತ, ಚಿಕ್ಕಬಳ್ಳಾಪುರ.

**ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳ ಸಂಖ್ಯೆ:–**

ಪಿರ್ಯಾದಿಯು ತನಗೆ ಬರಬೇಕಾಗಿದ್ದ ಪಿತ್ರಾರ್ಜಿತ ಜಮೀನಿಗಾಗಿ ದಾಯಾದಿ ಶ್ರೀ ಮಲ್ಲಣ್ಣ ಮತ್ತಿತರರ ವಿರುದ್ಧ ಗೌರಿಬಿದನೂರು ನಗರ ಠಾಣೆಯಲ್ಲಿ ಕೊಟ್ಟಿದ್ದ ದೂರು ಮೊಕದ್ದಮೆ ಸಂಖ್ಯೆ: 12/2008ಕ್ಕೆ ಸಂಬಂಧಿಸಿದಂತೆ.

**ಆಪಾದಿತರ ಸಮಜಾಯಿಷಿ ಹೇಳಿಕೆಗಳು:–**

ಶ್ರೀಮತಿ ಸಿ. ಕೆ. ಶ್ರೀವಾಣಿ, ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಸಿ. ಜೆ. ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಗೌರಿಬಿದನೂರು (ಹಾಲಿ ಅಮಾನತ್ತಿನಲ್ಲಿರುವ) ಇವರು ದಿನಾಂಕ 23–10–2010 ರಂದು ತನಿಖಾಧಿಕಾರಿಗಳಿಗೆ ಸ್ವರಕ್ಷಣಾ ಹೇಳಿಕೆ.

ತನಿಖಾಧಿಕಾರಿಗಳಾದ ಶ್ರೀ ಎಂ. ಸಿ. ಬೂದಿಹಾಳ್, ಪೊಲೀಸ್ ಉಪಾಧೀಕ್ಷಕರು, ಚಿಕ್ಕಬಳ್ಳಾಪುರ ಲೋಕಾಯುಕ್ತ ಠಾಣೆ, ಇವರು ಶ್ರೀಮತಿ ಸಿ.ಕೆ. ಶ್ರೀವಾಣಿ, ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಸಿ.ಜೆ. ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಗೌರಿಬಿದನೂರು, ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ, ಚಿಕ್ಕಬಳ್ಳಾಪುರ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ 12/2010ರ ಕಲಂ:7, 13(1)(ಡಿ)ರ/ವಿ 13(2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರಾದ ಶ್ರೀಮತಿ ಸಿ. ಕೆ. ಶ್ರೀವಾಣಿ, ಸಹಾಯಕ ಸರ್ಕಾರಿ ಅಭಿಯೋಜಕರು, (ಪ್ರಧಾನ ಸಿ.ಜೆ. ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಗೌರಿಬಿದನೂರು) ಇವರು ಗೌರಿಬಿದನೂರು ಪ್ರಧಾನ ಸಿ.ಜೆ. ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ವಿಚಾರಣೆಯಲಿದ್ದ, ಸಿ.ಸಿ.ನಂ. 522/2009 ಕೇಸನ್ನು ಬಲಪಡಿಸಿಕೊಡಲು ದಿನಾಂಕ 03–09–2010 ರಂದು ಪಿರ್ಯಾದಿ ನ್ಯಾಯಾಲಯದ ವಿಚಾರಣೆಗೆ ಹೋಗಿದ್ದಾಗ ಪಿರ್ಯಾದಿಗೆ ಈ ಕೇಸನ್ನು ಬಲಪಡಿಸಿಕೊಡಲು ಸ್ವಲ್ಪ ಹಣ ಖರ್ಚಾಗುವುದೆಂದು ಹಣಕ್ಕೆ ಒತ್ತಾಯಿಸಿದ್ದು, ಆ ಕಾಲಕ್ಕೆ ಪಿರ್ಯಾದಿಯ ಸ್ನೇಹಿತ ಶ್ರೀ ಶೂಲಪಾಣಿರವರು ಸಹ ಹೋಗಿದ್ದು, ಪಿರ್ಯಾದಿಗೆ ರೂ. 3,000/–ಗಳನ್ನು ತಂದುಕೊಡುವಂತೆಯೂ, ಇಲ್ಲದಿದ್ದಲ್ಲಿ ನ್ಯಾಯಾಲಯದಲ್ಲಿ ಕೇಸು ನಿಲ್ಲುವುದಿಲ್ಲವೆಂದು ಹೇಳಿ ಒತ್ತಾಯ ಮಾಡಿದ್ದು, ಪಿರ್ಯಾದಿಗೆ ಲಂಚ ಕೊಡಲು ಇಷ್ಟವಿಲ್ಲದ ಕಾರಣ, ಆಪಾದಿತೆ ಸರ್ಕಾರಿ ವಕೀಲರಾದ ಶ್ರೀಮತಿ ಸಿ.ಕೆ. ಶ್ರೀವಾಣಿ, ಇವರ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ವ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ 23–10–2010 ರಂದು ಗೌರಿಬಿದನೂರಿನಲ್ಲಿ ಚಿಕ್ಕಬಳ್ಳಾಪುರ ಲೋಕಾಯುಕ್ತ, ಪೊಲೀಸರು ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀಮತಿ ಸಿ. ಕೆ. ಶ್ರೀವಾಣಿ, ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಸಿ. ಜೆ. ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಗೌರಿಬಿದನೂರು ಇವರು ಅಕ್ರಮ ಸಂಭಾವನೆಯದ 3,000–00 ರೂ.ಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತರ ಬಲಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಹಾಗೂ ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಪಿರ್ಯಾದು ಹಾಗೂ ಆಪಾದಿತ ಶ್ರೀಮತಿ ಸಿ. ಕೆ. ಶ್ರೀವಾಣಿ ಇವರ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ. 3,000/–ಗಳನ್ನು ಶ್ರೀ ಸಿ. ಕೆ. ಶ್ರೀವಾಣಿ ಇವರಿಂದ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ)ರ ಸಹ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಸರ್ಕಾರಕ್ಕೆ ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಅನ್ವಯ ಕಲಂ 7, 13(1)(ಡಿ) ಸಹ ಕಲಂ 13(2)ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19(1)(ಬಿ)ರ ಅನ್ವಯ ಮಂಜೂರಾತಿಯನ್ನು ಮಾನ್ಯ ಕರ್ನಾಟಕ ಲೋಕಾಯುಕ್ತರು ಇವರಿಗೆ ನೀಡುವುದು ಅವಶ್ಯ ಎಂದು ಸರ್ಕಾರವು ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತರನ್ನು ಕೆಲಸದಿಂದ ತೆಗೆದುಹಾಕಲು ಅಧಿಕಾರವುಳ್ಳದಾಗಿರುತ್ತದೆ. ಆದ್ದರಿಂದ, ಲಂಚ ನಿರೋಧ ಕಾಯ್ದೆ 1988ರ ಕಲಂ 19(1)(ಬಿ)ರ ಅಡಿ ಆಪಾದಿತ ಸಾರ್ವಜನಿಕ ಅಧಿಕಾರಿಯಾದ ಶ್ರೀಮತಿ ಸಿ. ಕೆ. ಶ್ರೀವಾಣಿ, ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಸಿ.ಜೆ. ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಗೌರಿಬಿದನೂರು ಹಾಲಿ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಸಿಂಧಗಿ, ಇವರನ್ನು ಕಲಂ 7 ಮತ್ತು 13(ಡಿ) ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 350 ಪಿಪಿಇ 2010, ಬೆಂಗಳೂರು, ದಿನಾಂಕ 13–12–2011**

ಶ್ರೀಮತಿ ಸಿ. ಕೆ. ಶ್ರೀವಾಣಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಸಿಂಧಗಿ ಹಿಂದಿನ ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಸಿ.ಜೆ. ಮತ್ತು ಜೆ.ಎಂ.ಎಫ್.ಸಿ., ನ್ಯಾಯಾಲಯ, ಗೌರಿಬಿದನೂರು ಇವರನ್ನು ಸರ್ಕಾರಿ ಸೇವೆಯಿಂದ ತೆಗೆದುಹಾಕುವ (ವಜಾ ಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತರು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರ ಪ್ರಕಾರ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19(1)(ಬಿ)ರ ಅನ್ವಯ ಮಂಜೂರಾತಿಯನ್ನು ಕರ್ನಾಟಕ ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡಲಾಗಿದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ) ನಿರ್ವಹಣೆ ನಿಯಮಾವಳಿ 1977ರ ನಿಯಮ 19(1)ರನ್ವಯ ಈ ಮೇಲ್ಕಂಡ ಆದೇಶವನ್ನು ನನ್ನ ಕಚೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ 13ನೇ ಡಿಸೆಂಬರ್ 2011ರಂದು ಹೊರಡಿಸಲಾಗಿದೆ.

ಕರ್ನಾಟಕ ಸರ್ಕಾರದ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಕೆ. ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ)

ಪಿ. ಆರ್. 158

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಎಂ.ಎಂ. ನಲತ್‌ವಾಡ್, ನಿವೃತ್ತ 11ನೇ ಅಪರ ಸರ್ಕಾರಿ ಅಭಿಯೋಜಕರು, 11ನೇ ಅಧಿಕ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಸೌಲಭ್ಯಕ್ಕೆ ಪರಿಗಣಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಅಧಿಸೂಚನೆ ಸಂಖ್ಯೆ: ಲಾ 15 ಪಿಪಿಇ 83, ದಿನಾಂಕ: 27–01–1984.
2. ಸರ್ಕಾರದ ಆದೇಶ ಸಂಖ್ಯೆ: ಲಾ 104 ಪಿಪಿಇ 84 ದಿನಾಂಕ: 28/29–06–1984.
3. ಶ್ರೀ ಎಂ.ಎಂ. ನಲತ್‌ವಾಡ್ ಇವರ ಮನವಿಯ ದಿನಾಂಕ: 18–12–2010.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಪಿಡಿಎನ್/ಲೆಕ್ಕ–1/252/2010–11, ದಿನಾಂಕ: 02–02–2011.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 27–01–1984ರ ಸರ್ಕಾರದ ಅಧಿಸೂಚನೆಯ ಕ್ರ.ಸಂ.: 06ರ ಅನ್ವಯ ಶ್ರೀ ಎಂ.ಎಂ. ನಲತ್‌ವಾಡ್, ನಿವೃತ್ತ 11ನೇ ಅಪರ ಸರ್ಕಾರಿ ಅಭಿಯೋಜಕರು, 11ನೇ ಅಧಿಕ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ ಇವರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 06–02–1984ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಮೇಲೆ (2)ರಲ್ಲಿ ಓದಲಾದ ದಿನಾಂಕ: 28/29–06–1984ರ ಸರ್ಕಾರದ ಆದೇಶದನ್ವಯ ಸದರಿ ಅಧಿಕಾರಿಯ ಜನ್ಮ ದಿನಾಂಕವನ್ನು 24–10–1951 ಎಂದು ಒಪ್ಪಲಾಗಿದೆ. ಮೇಲೆ (3)ರಲ್ಲಿ ಓದಲಾದ ದಿನಾಂಕ: 18–12–2010ರ ಮನವಿಯಲ್ಲಿ ಶ್ರೀ ಎಂ.ಎಂ. ನಲತ್‌ವಾಡ್‌ರವರು ಅವರಿಗೆ 33 ವರ್ಷಗಳಾಗಿದ್ದಾಗ ಸರ್ಕಾರಿ ಸೇವೆಗೆ ಸೇರಿದ್ದು, ನಿಯಮಾನುಸಾರ ಗರಿಷ್ಠ ಮಿತಿಯಾದ 04 ವರ್ಷಗಳ ಹೆಚ್ಚುವರಿ ಸೇವಾ ಸೌಲಭ್ಯಕ್ಕೆ ಅವರು ಅರ್ಹರಾಗಿರುವುದರಿಂದ ಪರಿಗಣಿಸುವಂತೆ ಕೋರಿರುತ್ತಾರೆ. ಮೇಲೆ (4)ರಲ್ಲಿ ಓದಲಾದ ದಿನಾಂಕ: 02–02–2011ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರುರವರು ಶ್ರೀ ಎಂ.ಎಂ. ನಲತ್‌ವಾಡ್‌ರವರು 32ವರ್ಷ 03 ತಿಂಗಳ 12 ದಿನಗಳಾಗಿದ್ದಾಗ ಸರ್ಕಾರಿ ಸೇವೆಗೆ ಸೇರಿದ್ದು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247 (ಎ)(1)ರನ್ವಯ ಎರಡು ವರ್ಷಗಳ ಹೆಚ್ಚುವರಿ ಸೇವಾ ಸೌಲಭ್ಯಕ್ಕೆ ಅರ್ಹರಿರುವುದರಿಂದ ಈ ಬಗ್ಗೆ ಆದೇಶವನ್ನು ಹೊರಡಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 70 ಪಿಪಿಇ 2011, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2011**

ಮೇಲಿನ ಪ್ರಸ್ತಾವನೆಯ ಹಿನ್ನೆಲೆಯಲ್ಲಿ, ಶ್ರೀ ಎಂ.ಎಂ. ನಲತ್‌ವಾಡ್, ನಿವೃತ್ತ 11ನೇ ಅಪರ ಸರ್ಕಾರಿ ಅಭಿಯೋಜಕರು, 11ನೇ ಅಧಿಕ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಅನ್ವಯ ಎರಡು ವರ್ಷಗಳ ಅಧಿಕ ಸೇವಾವಧಿಯನ್ನು ಮಾತ್ರ ಅವರ ನಿವೃತ್ತಿ ವೇತನ ಸೌಲಭ್ಯಗಳಿಗೆ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ.: ಆಇ 1199 ಸೇ–3/2011, ದಿನಾಂಕ: 23–11–2011ರಲ್ಲಿ ನೀಡಿರುವ ಸಮಿತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಪೊಲೀಸ್ ಸೇವೆಗಳು–ಬಿ)

ಪಿ.ಆರ್. ನಂ. 159

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀಯುತರಾದ ಟಿ.ಎಂ. ಶಿವಕುಮಾರ್, ಪೊಲೀಸ್ ಇನ್‌ಸ್ಪೆಕ್ಟರ್, ಕೊರಟಗೆರೆ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ ಹಾಗೂ ಎನ್.ಆರ್. ವೆಂಕಟೇಶ್, ಪೊಲೀಸ್ ಸಬ್–ಇನ್‌ಸ್ಪೆಕ್ಟರ್, ಗಿರಿನಗರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರುಗಳು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: 10/ಡಿಇ–1/ಆರ್.6/2009 ದಿನಾಂಕ: 15–09–2009.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು. ಇವರ ಆದೇಶ ಸಂಖ್ಯೆ: ಸಿಬಿ(8)/105/2009–10 ದಿನಾಂಕ: 22–07–2010.
3. ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 13–09–10 ಮತ್ತು 20–09–2010.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)/105/2009–10 ದಿನಾಂಕ: 28–01–11.
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 140 ಸಿಎನ್‌ಎಸ್ 11 ದಿನಾಂಕ: 01–12–2011.

**ಪ್ರಸ್ತಾವನೆ:**

ಶ್ರೀಯುತರಾದ ಟಿ.ಎಂ. ಶಿವಕುಮಾರ್, ಪೊಲೀಸ್ ಇನ್‌ಸ್ಪೆಕ್ಟರ್ ಹಾಗೂ ಎನ್.ಆರ್. ವೆಂಕಟೇಶ್, ಪೊಲೀಸ್ ಸಬ್–ಇನ್‌ಸ್ಪೆಕ್ಟರ್ ಇವರುಗಳು ಬೆಂಗಳೂರಿನ ರಾಜಾಜಿನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಬೇಜವಾಬ್ದಾರಿತನ ಹಾಗೂ ಅಧಿಕಾರ

ದುರುಪಯೋಗಪಡಿಸಿಕೊಂಡಿರುವ ಆರೋಪದ ಮೇಲೆ ಇನ್ನಿಬ್ಬರು ಸಿಬ್ಬಂದಿಗಳೊಂದಿಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ಮತ್ತು 8 ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

(i) **ಶ್ರೀ ಟಿ.ಎಂ. ಶಿವಕುಮಾರ್, ಪೊಲೀಸ್ ಇನ್‌ಸ್ಪೆಕ್ಟರ್:**

"ಶ್ರೀ ಟಿ.ಎಂ. ಶಿವಕುಮಾರ್, ಪಿಐ ಆದ ನೀವು ರಾಜಾಜಿನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದೀರಿ. ಶ್ರೀ ವೆಂಕಟೇಶ್ ಬಿನ್ ಲೇಟ್ ಪೂಜಪ್ಪ, 55 ವರ್ಷ, ವಾಸ ನಂ. 589, 10ನೇ ಸಿ ಕ್ರಾಸ್, ವೆಸ್ಟ್ ಆಫ್ ಕಾರ್ಡ್ ರಸ್ತೆ, 3ನೇ ಮುಖ್ಯ ರಸ್ತೆ, 2ನೇ ಹಂತ, ಮಹಾಲಕ್ಷ್ಮೀಪುರ, ಬೆಂಗಳೂರು–86 ರವರಿಗೆ ಸೇರಿದ ರಾಜಾಜಿನಗರ 2ನೇ ಬ್ಲಾಕ್, 26ನೇ ಕ್ರಾಸ್, ನಂ.1, 261/ಬಿ/14 ರಲ್ಲಿರುವ ಮನೆಯ ಆಸ್ತಿಯು ಅರ್ಜಿದಾರರಾದ ಶ್ರೀ ವೆಂಕಟೇಶ ಮತ್ತು ಇವರ ತಮ್ಮ ಶ್ರೀನಿವಾಸ, ತಂಗಿ ಶ್ರೀಮತಿ ನಾಗರತ್ನ ಮತ್ತು ಅಕ್ಕ ಶ್ರೀಮತಿ ಮುನಿಲಕ್ಷ್ಮಮ್ಮ ರವರ ಹೆಸರಿಗೆ ನೋಂದಣಿ ಆಗಿರುತ್ತದೆ. ಆದರೆ ಈ ಎಲ್ಲಾ 4 ಜನರಿಗೆ ಸೇರಿದ ಮನೆಯನ್ನು ಅರ್ಜಿದಾರರ ತಮ್ಮ ಶ್ರೀ ಶ್ರೀನಿವಾಸ ಮತ್ತು ಆತನ ಪತ್ನಿ ಶ್ರೀಮತಿ ಲಕ್ಷ್ಮಿರವರು ಎಲ್ಲಾ ಆಸ್ತಿಯನ್ನು ಕಬಳಿಸುವ ಸಲುವಾಗಿ ಅವರ ವಶದಲ್ಲಿಟ್ಟುಕೊಂಡಿರುತ್ತಾರೆ. ಮೇಲ್ಕಂಡ ವಿವಾದಿತ ಆಸ್ತಿಯ ಖಾತೆ ಅರ್ಜಿದಾರರಾದ ಶ್ರೀ ವೆಂಕಟೇಶ್ ಹಾಗೂ ಅವರ ತಮ್ಮ ಶ್ರೀನಿವಾಸ ರವರ ಹೆಸರಿನಲ್ಲಿದ್ದು, ಶ್ರೀ ವೆಂಕಟೇಶ್ ರವರ ವಿವಾದಿತ ಆಸ್ತಿಯ ಮೊದಲನೇ ಮಹಡಿಯ ಒಂದು ಭಾಗದಲ್ಲಿ ಭೋಗ್ಯಕ್ಕೆ 2004ನೇ ಸಾಲಿನಿಂದ ವಾಸವಾಗಿರುವ ಶ್ರೀಮತಿ ಪಾರ್ವತಮ್ಮ ಎಂಬುವರಿಗೆ ಅರ್ಜಿದಾರರ ತಮ್ಮ ಶ್ರೀನಿವಾಸ್ ಹಾಗೂ ಅವರ ಪತ್ನಿ ಶ್ರೀಮತಿ ಲಕ್ಷ್ಮಿ ರವರು ಕಿರುಕುಳ ನೀಡುತ್ತಿದ್ದರಿಂದ ಶ್ರೀಮತಿ ಪಾರ್ವತಮ್ಮ ರವರು ರಾಜಾಜಿನಗರ ಪೊಲೀಸ್ ಠಾಣೆಯಲ್ಲಿ ದಿನಾಂಕ: 22–09–2008 ರಂದು ಕೊಟ್ಟ ದೂರಿನ ಮೇರೆಗೆ ಠಾಣೆಯ ಸೀಮಿಸ್ 361/2008 ರಲ್ಲಿ ದಾಖಲಿಸಿಕೊಂಡು ವಿಚಾರಣೆ ನಡೆಸಿದಾಗಲೂ ಸಹ ದಾಖಲಾತಿಗಳು ಶ್ರೀಮತಿ ಪಾರ್ವತಮ್ಮ ರವರ ಪರವಾಗಿರುತ್ತದೆ. ಅವರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಓ.ಎಸ್. ಸಂಖ್ಯೆ: 4403/2008 ರಲ್ಲಿ ದಾವೆ ಹೂಡಿ ತಡೆಯಾಜ್ಞೆ ತಂದಿದ್ದು, ಮಾನ್ಯ ಉಚ್ಚ ನ್ಯಾಯಾಲಯದಿಂದ ದಿನಾಂಕ: 09–01–2009ರವರೆಗೆ ತಡೆಯಾಜ್ಞೆ ಇದ್ದರೂ ಸದರಿ ವಿವಾದಿತ ಮನೆಯಲ್ಲಿ ಶ್ರೀ ಚಂದ್ರಶೇಖರ್ ರವರು ವಾಸವಿರುತ್ತಾರೆಂದು ಸೀಮಿಸ್ ಮುಕ್ತಾಯ ಮಾಡಿರುವುದು ಕಂಡು ಬಂದಿರುತ್ತದೆ. ಈ ರೀತಿಯಾಗಿ ಜವಾಬ್ದಾರಿಯುತ ಠಾಣಾಧಿಕಾರಿಯಾದ ನೀವು ನಿಮ್ಮ ಅಧೀನ ಅಧಿಕಾರಿಗಳಿಗೆ ಸರಿಯಾದ ಮಾರ್ಗದರ್ಶನ ನೀಡದೆ ಸಿವಿಲ್ ವಿವಾದದಲ್ಲಿ ಅನಾವಶ್ಯಕ ಕ್ರಮವನ್ನು ಜರುಗಿಸಿ, ನೀವು ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಅಧಿಕಾರ ದುರುಪಯೋಗಪಡಿಸಿಕೊಂಡಿರುತ್ತೀರಿ."

(ii) **ಶ್ರೀ ಎನ್.ಆರ್. ವೆಂಕಟೇಶ್, ಪೊಲೀಸ್ ಸಬ್ ಇನ್‌ಸ್ಪೆಕ್ಟರ್:**

"ಶ್ರೀ ಎನ್.ಆರ್. ವೆಂಕಟೇಶ್, ಪಿ.ಎಸ್.ಐ. ಆದ ನೀವು ಹಾಲಿ ಬಸವನಗುಡಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದೀರಿ. ಈ ಹಿಂದೆ ದಿನಾಂಕ: 21–05–2005 ರಿಂದ 21–09–2008 ರವರೆಗೆ ರಾಜಾಜಿನಗರ ಪೊಲೀಸ್ ಠಾಣೆ, ಬೆಂಗಳೂರು ನಗರ ಇಲ್ಲಿ ಕರ್ತವ್ಯ ನಿರ್ವಹಿಸಿದ್ದು, ಅರ್ಜಿದಾರರಾದ ಶ್ರೀ ವೆಂಕಟೇಶ್ ರವರ ತಮ್ಮ ಶ್ರೀನಿವಾಸ ರವರು ವಿವಾದಿತ ಮನೆಯಲ್ಲಿ ಭೋಗ್ಯದ ಆಧಾರದ ಮೇಲೆ ವಾಸವಿದ್ದ ಶ್ರೀಮತಿ ಪಾರ್ವತಮ್ಮ ರವರು ಮನೆಯಲ್ಲಿ ಇಲ್ಲದಿರುವಾಗ ಅವರ ಮನೆ ಬೀಗ ಒಡೆದು ಅವರ ಮನೆಯಲ್ಲಿದ್ದ ಸಾಮಾನುಗಳನ್ನು ಸಾಗಿಸಿ ಬೇರೆಯವರಿಗೆ ಬಾಡಿಗೆಗೆ ಕೊಟ್ಟಿದ್ದು, ಈ ಬಗ್ಗೆ ದಿನಾಂಕ: 06–09–2008 ರಂದು ರಾಜಾಜಿನಗರ ಪೊಲೀಸ್ ಠಾಣೆಯಲ್ಲಿ ದೂರು ಕೊಟ್ಟಾಗ ಠಾಣಾಧಿಕಾರಿಯವರು ನಿಮಗೆ ದೂರನ್ನು ವರ್ಗಾಯಿಸಿ ಕೂಲಂಕಷವಾಗಿ ವಿಚಾರ ಮಾಡಿ ವರದಿಯನ್ನು ನೀಡುವಂತೆ ಸಲಹೆ ನೀಡಿದ್ದರ ಮೇರೆಗೆ ನೀವು ದಿನಾಂಕ: 21–09–2008 ರಂದು ಎಲ್ಲರನ್ನು ಠಾಣೆಗೆ ಕರೆಸಿ ವಿಚಾರಣೆ ಮಾಡಿರುತ್ತೀರಿ. ಆ ಸಮಯದಲ್ಲಿ ಶ್ರೀ ವೆಂಕಟೇಶ್ ರವರು ಭೋಗ್ಯದಾರರಾದ ಶ್ರೀಮತಿ ಪಾರ್ವತಮ್ಮ ರವರೊಂದಿಗೆ ಮಾಡಿಕೊಂಡ ಭೋಗ್ಯದ ಕರಾರು ಪತ್ರ, ಗ್ಯಾಸ್ ಬಿಲ್ಲು ಇನ್ನಿತರೆ ದಾಖಲಾತಿಗಳನ್ನು ನಿಮಗೆ ತೋರಿಸಿದ್ದು, ಜವಾಬ್ದಾರಿಯುತ ಅಧಿಕಾರಿಯಾದ ನೀವು ಪರಿಶೀಲಿಸದೆ ಭೋಗ್ಯದಾರರಾದ ಶ್ರೀಮತಿ ಪಾರ್ವತಮ್ಮ ರವರು ವಾಸವಿದ್ದ ಮನೆಯಲ್ಲಿ ಶ್ರೀ ಚಂದ್ರಶೇಖರ್ ಎಂಬುವರು ವಾಸವಾಗಿರುತ್ತಾರೆಂದು ಸದರಿ ಮನೆ ಬಳಿ ನೀವು ಹೋಗದೆ ನಿಮ್ಮ ವ್ಯವಹಾರವನ್ನು ನ್ಯಾಯಾಲಯದಲ್ಲಿ ಬಗೆಹರಿಸಿಕೊಳ್ಳಿ ಎಂದು ಅರ್ಜಿದಾರರಾದ ಶ್ರೀ ವೆಂಕಟೇಶ್ ಹಾಗೂ ಶ್ರೀಮತಿ ಪಾರ್ವತಮ್ಮ ರವರಿಗೆ ತಿಳಿಸಿರುತ್ತೀರಿ. ಅಲ್ಲದೆ ಶ್ರೀಮತಿ ಪಾರ್ವತಮ್ಮ ರವರ ಬಳಿ ಎಲ್ಲಾ ದಾಖಲಾತಿಗಳು ಇದ್ದರೂ ಸಹ ಅವುಗಳನ್ನು ನೀವು ಪರಿಶೀಲಿಸದೆ ನ್ಯಾಯಯುತವಾಗಿ ನಡೆದುಕೊಳ್ಳದೆ ಅರ್ಜಿದಾರರ ತಮ್ಮ ಶ್ರೀನಿವಾಸ ರವರಿಂದ ಯಾವುದೋ ಆಪೇಕ್ಷೆಗೆ ಒಳಪಟ್ಟು ಅವರೊಂದಿಗೆ ಅವುಗಳನ್ನು ನೀವು ಪರಿಶೀಲಿಸದೆ ನ್ಯಾಯಯುತವಾಗಿ ನಡೆದುಕೊಳ್ಳದೆ ಅರ್ಜಿದಾರರ ತಮ್ಮ ಶ್ರೀನಿವಾಸ್ ರವರಿಂದ ಯಾವುದೋ ಅಪೇಕ್ಷೆಗೆ ಒಳಪಟ್ಟು ಅವರೊಂದಿಗೆ ಶಾಮೀಲಾಗಿ, ಅವರಿಗೆ ಸಹಾಯ ಮಾಡುವ ಉದ್ದೇಶದಿಂದ ಅವರಿಗೆ ಒತ್ತಾಸೆಯಾಗಿ ನಿಂತು, ನೀವು ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ ಹಾಗೂ ಅಧಿಕಾರ ದುರುಪಯೋಗ ಹಾಗೂ ಕರ್ತವ್ಯ ಲೋಪವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಜಂಟಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 15–09–2009ರ ಆದೇಶದಲ್ಲಿ "ಶ್ರೀ ಟಿ.ಎಂ. ಶಿವಕುಮಾರ್, ಪೊಲೀಸ್ ಇನ್‌ಸ್ಪೆಕ್ಟರ್ ಹಾಗೂ ಶ್ರೀ ಎನ್.ಆರ್. ವೆಂಕಟೇಶ್, ಪೊಲೀಸ್ ಸಬ್ ಇನ್‌ಸ್ಪೆಕ್ಟರ್ ಇವರುಗಳು ಪ್ರಸ್ತುತ ಪಡೆಯುತ್ತಿರುವ ವೇತನ ಶ್ರೇಣಿಯಲ್ಲಿನ ಒಂದು ಹಂತವನ್ನು ಕೆಳಗಿಳಿಸಲಾಗಿದೆ. ಅವರುಗಳು ಕೆಳಗಿಳಿಸಿದ ಹಂತದಿಂದ ತಮ್ಮ ವಾರ್ಷಿಕ ವೇತನ ಬಡ್ತಿಯನ್ನು ಹೊಸದಾಗಿ ಗಳಿಸುವುದು, ದಿನಾಂಕ: 24–02–2009 ರಿಂದ 17–04–2009 ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೈರೆಕ್ಟರ್ ಜನರಲ್ ಮತ್ತು ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು. ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 22–07–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರುಗಳ ವಿರುದ್ಧ ಆರೋಪವು ಸಾಬೀತಾಗಿದ್ದು, ಆದರೆ ಶಿಸ್ತು ಪ್ರಾಧಿಕಾರದ ದಂಡನಾದೇಶವು ಕರ್ನಾಟಕ ಸೇವಾ ನಿಯಮಾವಳಿಯ ನಿಯಮ 59(1)(ಬಿ)ಗೆ ವ್ಯತಿರಿಕ್ತವಾಗಿರುವುದನ್ನು ಗಮನಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸಲು ಸರ್ಕಾರವು ತೀರ್ಮಾನಿಸಿ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 151 ಪೊಸಿಅ 2010 ಬೆಂಗಳೂರು, ದಿನಾಂಕ: 17-12-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಯುತರಾದ ಟಿ.ಎಂ. ಶಿವಕುಮಾರ್, ಪೊಲೀಸ್ ಇನ್‌ಸ್ಪೆಕ್ಟರ್, ಕೊರಟಗೆರೆ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ ಹಾಗೂ ಎನ್.ಆರ್. ವೆಂಕಟೇಶ್, ಪೊಲೀಸ್ ಸಬ್-ಇನ್‌ಸ್ಪೆಕ್ಟರ್, ಗಿರಿನಗರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರುಗಳಿಗೆ ದಿನಾಂಕ: 15-09-2009ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರವು ವಿಧಿಸಿದ ದಂಡನಾದೇಶವನ್ನು ಈ ಕೆಳಕಂಡಂತೆ ಮಾರ್ಪಡಿಸಿ ಆದೇಶಿಸಿದೆ.

1. ಶ್ರೀ ಟಿ.ಎಂ. ಶಿವಕುಮಾರ್, ಪೊಲೀಸ್ ಇನ್‌ಸ್ಪೆಕ್ಟರ್ ಮತ್ತು ಶ್ರೀ ಎನ್.ಆರ್. ವೆಂಕಟೇಶ್, ಪೊಲೀಸ್ ಸಬ್-ಇನ್‌ಸ್ಪೆಕ್ಟರ್, ಇವರುಗಳ ವೇತನವನ್ನು ಪ್ರಸ್ತುತ ಪಡೆಯುತ್ತಿರುವ ವೇತನ ಶ್ರೇಣಿಯಲ್ಲಿನ ಕೆಳಹಂತಕ್ಕೆ ಎರಡು ವರ್ಷಗಳ ಅವಧಿಗೆ ಕೆಳಗಿಳಿಸಲಾಗಿದೆ.
2. ಸದರಿ ಎರಡು ವರ್ಷಗಳ ದಂಡನಾವಧಿ ಮುಗಿದ ನಂತರ ಇವರುಗಳು ಕೆಳಗಿಳಿಸಿದ ಹಂತದಿಂದ ಹೊಸದಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಗಳಿಸುವುದು.
3. ದಿನಾಂಕ: 24-02-2009 ರಿಂದ 17-04-2009ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್. ನಂ. 160

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಬಿ.ಕೆ. ಶಿವಲಿಂಗಯ್ಯ, ಹೆಚ್.ಸಿ. ಹಲಸೂರು ಸಂಚಾರ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಆಯುಕ್ತರು (ಸಂಚಾರ) ಪೂರ್ವ ವಿಭಾಗ, ಬೆಂಗಳೂರು, ಇವರ ಆದೇಶ ಸಂಖ್ಯೆ: ಇವಿ/ಆರ್7/19/ಸಂಪೊ/2005 ದಿನಾಂಕ: 16-01-2006.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಅಪರ ಪೊಲೀಸ್ ಆಯುಕ್ತರು (ಸಂಚಾರ) ಬೆಂಗಳೂರು, ಇವರ ಆದೇಶ ಸಂಖ್ಯೆ: 70/ಅಪೀಲು/ಅಪರ. ಸಿಪಿ/ಸಂಚಾರ/2011 ದಿನಾಂಕ: 31-03-2011.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 14-06-2011.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು. ಇವರ ಪತ್ರ ಸಂಖ್ಯೆ: ಅಪೀಲು (2) 23/2011-12 ದಿನಾಂಕ: 24-08-2011.

**ಪ್ರಸ್ತಾವನೆ:**

ಶ್ರೀ ಬಿ.ಕೆ. ಶಿವಲಿಂಗಯ್ಯ, ಹೆಚ್.ಸಿ. ಇವರು ಬೆಂಗಳೂರಿನ ಮೈಕೋಲೇಔಟ್ ಸಂಚಾರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಬೇಜವಾಬ್ದಾರಿತನ, ನಿರ್ಲಕ್ಷತೆ ಉದಾಸೀನತೆಯನ್ನು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

ದೋಷಾರೋಪಣೆ:

"ನೀವು ದಿನಾಂಕ: 04-12-2003 ರಂದು ಮಧ್ಯಾಹ್ನ 2ನೇ ಪಾಳಿಗೆ ಬಿ.ಟಿ.ಎಂ. 16ನೇ ಮುಖ್ಯ ರಸ್ತೆ, ಜಂಕ್ಷನ್ನಿಗೆ ಕರ್ತವ್ಯಕ್ಕೆ ನೇಮಕ ಮಾಡಿದ್ದು, ಸುಮಾರು 17-30 ಗಂಟೆ ಸಮಯದಲ್ಲಿ ಮದ್ಯಪಾನ ಸೇವನೆ ಮಾಡಿ ಮೋಟಾರ್ ಸೈಕಲ್ ನಂ. ಕೆಎ-05 ವೈ-4015 ವಾಹನವನ್ನು ನಿಲ್ಲಿಸಿ ವಾಹನದ ದಾಖಲಾತಿಗಳನ್ನು ಪಡೆಯಲು ಒತ್ತಾಯ ಮಾಡಿ ನಂತರ ವಾಹನ ಚಾಲನಾ ಪತ್ರವನ್ನು ಪರಿಶೀಲಿಸಿ ರೂ. 300/- ದಂಡವಾಗುತ್ತದೆ ಹಣ ನೀಡಿ ಎಂದು ಹೆದರಿಸಿ ಮದ್ಯಪಾನದ ನಿಷೆಯಲ್ಲಿ ಮೋಟಾರ್ ಸೈಕಲ್‌ಗೆ ಒದ್ದು ಹಾಗೂ ತಮ್ಮ ಕೈಯಿಂದ ವಾಕಿಯಿಂದ ಫಿರ್ಯಾದುದಾರರಿಗೆ ತಿವಿದು ನೂಕಿ ಅವಾಚ್ಯ ಶಬ್ದಗಳಿಂದ ಬೈದು ನೀನು ಯಾರಿಗೆ ಹೇಳುತ್ತೀಯೊ ಹೇಳು ಎಂದು ಅಸಭ್ಯತನದಿಂದ ವರ್ತಿಸಿ ಶ್ರೀ ಬಸವರಾಜು, ಪಿ.ಎಸ್.ಐ. ರವರಿಗೂ ಸಹ ಸಾರ್ವಜನಿಕರೆದುರು ಉದ್ಧಟತನದಿಂದ ಬೆದರಿಕೆ ಹಾಕಿ ನಿಂದಿಸಿ ಕೂಗಾಡುತ್ತ ಕರ್ತವ್ಯವನ್ನು ಪರಿತ್ಯಜಿಸಿ ಆಟೋದಲ್ಲಿ ಹೊರಟುಹೋಗಿದ್ದು ನೀವು ಕರ್ತವ್ಯದಲ್ಲಿ ಬೇಜವಾಬ್ದಾರಿತನ, ನಿರ್ಲಕ್ಷತೆ ಹಾಗೂ ಉದಾಸೀನತೆಯನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿದ್ದು, ಇಲಾಖಾ ವಿಚಾರಣೆಯಲ್ಲಿ ಆರೋಪವು ಭಾಗಶಃ ಸಾಬೀತಾಗಿದೆ ಎಂದು ವಿಚಾರಣಾಧಿಕಾರಿಗಳು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು (ಸಂಚಾರ) ಪೂರ್ವ ವಿಭಾಗ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 16-01-2006ರ ಆದೇಶದಲ್ಲಿ ಅರ್ಜಿದಾರರ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗುವಂತೆ ಸ್ಥಗಿತಗೊಳಿಸಲಾಗಿದೆ. ದಿನಾಂಕ: 10-12-2003 ರಿಂದ 09-02-2004 ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಆಯುಕ್ತರು (ಸಂಚಾರ) ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 31-03-2011ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಬೇಜವಾಬ್ದಾರಿತನ, ನಿರ್ಲಕ್ಷತೆ ಹಾಗೂ ಉದಾಸೀನತೆಯನ್ನು ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 66 ಪೊಸಿಅ 2011 ಬೆಂಗಳೂರು, ದಿನಾಂಕ: 17-12-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಕೆ. ಶಿವಲಿಂಗಯ್ಯ, ಹೆಚ್.ಸಿ. ಹಲಸೂರು ಸಂಚಾರ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. ನಂ. 161

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀಯುತರುಗಳಾದ ಪ್ರಕಾಶ ಜಿ. ಮುರಗೋಡ, ಪಿ.ಐ., ರಾಜ್ಯ ಗುಪ್ತ ವಾರ್ತೆ, ಗೋಕಾಕ, ಸಿ.ಬಿ. ಹಿರೇಗೌಡರ, ಸಿ.ಪಿ.ಸಿ. ಲಂಕೇಶ್ವರ ಪೊಲೀಸ್ ಠಾಣೆ, ಎಫ್.ಬಿ. ಮಡಿವಾಳರ, ಸಿ.ಪಿ.ಸಿ. ಮುಂಡರಗಿ ಪೊಲೀಸ್ ಠಾಣೆ, ಎಸ್.ಎಸ್. ಹೊಲಿ, ಎ.ಪಿ.ಸಿ. ಹಾಲಿ ನರಗುಂದ ಪೊಲೀಸ್ ಠಾಣೆ, ಹಾಗೂ ಬಿ.ಹೆಚ್. ಡಂಬಳ, ಸಿ.ಪಿ.ಸಿ. ಬೆಟ್ಟಗೆರೆ ಪೊಲೀಸ್ ಠಾಣೆ, ಇವರುಗಳು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(8)/17/2005-06 ದಿನಾಂಕ: 09-12-2010.
2. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 04-04-2011 ಮತ್ತು 06-04-2011.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು. ಇವರ ಪತ್ರ ಸಂಖ್ಯೆ: ಸಿ.ಬಿ(8)17/2005-06 ದಿನಾಂಕ: 06-07-2011.

**ಪ್ರಸ್ತಾವನೆ:**

ಶ್ರೀಯುತರುಗಳಾದ ಪ್ರಕಾಶ ಜಿ. ಮುರಗೋಡ, ಪಿ.ಐ., ಸಿ.ಬಿ. ಹಿರೇಗೌಡರ, ಎಫ್.ಬಿ. ಮಡಿವಾಳರ, ಸಿಪಿಸಿ ಹಾಗೂ ಎಸ್.ಎಸ್. ಹೊಲಿ, ಎ.ಪಿ.ಸಿ. ಹಾಗೂ ಬಿ.ಹೆಚ್.ಡಂಬಳ, ಸಿಪಿಸಿ, ಗದಗ ಪೊಲೀಸ್ ಠಾಣೆ, ಇವರುಗಳು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಘೋರ ಕರ್ತವ್ಯಚ್ಯುತಿ, ನಿಷ್ಕಾಳಜಿತನ ಹಾಗೂ ದುರ್ನಡತೆಯನ್ನು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ರೊಂದಿಗೆ 8ರ ಜೊತೆಯಲ್ಲಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಆಪಾದಿತ ಪೊಲೀಸ್ ಅಧಿಕಾರಿ 1) ಪಿ.ಜಿ. ಮುರಗೋಡ, ಸಿಪಿಐ ಗದಗ ಶಹರ್ ವೃತ್ತ, ಗದಗ 2) ಸಿಪಿಸಿ-728, ಸಿ.ಬಿ. ಹಿರೇಗೌಡ, ಗದಗ ಶಹರ್ ಠಾಣೆ 3) ಸಿಪಿಸಿ 630, ಎಫ್.ಬಿ. ಮಡಿವಾಳರ, ಗದಗ ಸಂಚಾರಿ ಠಾಣೆ, 4) ಸಿಪಿಸಿ 715, ಬಿ.ಹೆಚ್. ಡಬಳ, ಗದಗ ಸಂಚಾರಿ ಠಾಣೆ ಮತ್ತು 5) ಎಪಿಸಿ-250, ಎಸ್.ಎಸ್. ಹೂಲಿ ವಾಹನ ಚಾಲಕ ಗದಗ ಜಿಲ್ಲೆ ರವರುಗಳಾದ ನೀವು ಪ್ರಖ್ಯಾತ ಚೀಟರ್ ಪ್ರವೃತ್ತಿವುಳ್ಳ ಮೋಹನ ವಾಳ್ವೇಕರ, ಗದಗ ವಾಸಿ ಜೊತೆಗೆ ಶಾಮೀಲಾಗಿ ಮಹಾರಾಷ್ಟ್ರದ ಬಾರಾಮತಿ ವಾಸಿ ಶ್ರೀ ಕಿಶೋರ ಮಾಣಿಕಲಾಲ ಮುತ್ತಾ ಈತನಿಗೆ ಒಂದಕ್ಕೆ ಎರಡು ಪಟ್ಟು ಹಣ ಕೊಡುವ ಆಮಿಷ ಒಡ್ಡಿ ಆತನಿಗೆ ನಂಬಿಕೆ ಹುಟ್ಟಿಸಿ ದಿನಾಂಕ: 08-03-2005 ರಂದು ಗದಗಿಗೆ ಕರೆಯಿಸಿ. ಅದೇ ದಿನದಂದು ಗದಗ-ಹುಬ್ಬಳ್ಳಿ ರಸ್ತೆಯಲ್ಲಿರುವ ಶಾನಬಾಗ ಲಾಜಿಂಗ್ ರೂ. ನಂ. 27ರಲ್ಲಿ ತಂಗುವ ವ್ಯವಸ್ಥೆ ಮಾಡಿಸಿದ ವಿಷಯವನ್ನು ಮುಂಚಿತವಾಗಿ ಆಪಾದಿತ ಪೊಲೀಸ್ ಅಧಿಕಾರಿಯಾದ ಸಿಪಿಐ ಪ್ರಕಾಶ ಮುರಗೋಡ, ಗದಗ, ಶಹರ್ ವೃತ್ತ ಆದ ನೀವು ಮೋಹನ ವಾಳ್ವೇಕರ ಇವನಿಂದ ಮಾಹಿತಿ ಪಡೆದುಕೊಂಡು ದಿನಾಂಕ: 08-03-2005 ರಂದು ರಾತ್ರಿ 11-30 ರಿಂದ 12-00 ಗಂಟೆಯ ಸುಮಾರಿಗೆ ನಿಮ್ಮ ಸಿಬ್ಬಂದಿಯೊಂದಿಗೆ ಅಂದರೆ ಸಿಪಿಸಿ 728 ಸಿ.ಬಿ. ಹಿಕೇಗೌಡ, ಸಿಪಿಸಿ 630 ಎಫ್‌ಬಿ ಮಡಿವಾಳರ, ಎಪಿಸಿ-250 ಎಸ್.ಎಸ್. ಹೂಲಿ ವಾಹನ ಚಾಲಕ ಮತ್ತು ಸಿಪಿಸಿ 715, ಬಿ.ಹೆಚ್. ಡಂಬಳ, ಸರಕಾರಿ ಜೀಪಿನಲ್ಲಿ ಸದರಿ ಲಾಜಿಂಗ್‌ನ ರೂಮ್ ನಂ. 27ಕ್ಕೆ ಹೋಗಿ ಸದರಿ ರೂಮ್‌ನಲ್ಲಿದ್ದ ಮಹಾರಾಷ್ಟ್ರದ ಬಾರಾಮತಿಯ ಕಿಶೋರ ಮುತ್ತಾ ಹಾಗೂ ಆತನ ಸಂಗಡಿಗರೊಂದಿಗೆ ಪ್ರಖ್ಯಾತ ಆರೋಪಿ ಮೋಹನ ವಾಳ್ವೇಕರ ಇದ್ದರೂ ಸಹ ಮೋಹನ ವಾಳ್ವೇಕರ ಇವರ ಪರಿಚಯವಿಲ್ಲದಂತೆ ನಟಿಸಿ, ಅವರಿಗೆ ಬೈಯ್ದು ಶ್ರೀ ಕಿಶೋರ ಮುತ್ತಾ ಇವನಿಗೆ ಹೊಡಿಬಡಿ ಮಾಡಿ ಜೀವದ ಬೆದರಿಕೆ ಹಾಕಿ ಅದರಲ್ಲಿ ರೂ. 2,50,000/-ಗಳನ್ನು ಕಿತ್ತುಕೊಂಡು ನಂತರ ಅದರಲ್ಲಿ ರೂ. 1,00,000/-ಗಳನ್ನು ಕುಖ್ಯಾತ ಚೀಟರ್‌ನಾದ ಮೋಹನ ವಾಳ್ವೇಕರ ಈತನಿಗೆ ಕೊಟ್ಟು ನಿಮ್ಮ ಕರ್ತವ್ಯದಲ್ಲಿ ಘೋರ ಕರ್ತವ್ಯಚ್ಯುತಿ ನಿಷ್ಕಾಳಜಿತನ ಹಾಗೂ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಜಂಟಿ ಇಲಾಖಾ ವಿಚಾರಣೆ ನಡೆಸಿದ್ದು, ವಿಚಾರಣಾಧಿಕಾರಿಗಳು ಇವರುಗಳ ವಿರುದ್ಧದ ಆರೋಪಗಳು ಭಾಗಶಃ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 09-12-2010ರ ಆದೇಶದಲ್ಲಿ ಅರ್ಜಿದಾರರುಗಳಿಗೆ ಈ ಕೆಳಕಂಡ ದಂಡನೆಗಳನ್ನು ವಿಧಿಸಿದ್ದಾರೆ.

i) ಇವರುಗಳು ಹಾಲಿ ಹೊಂದಿರುವ ಹುದ್ದೆಯಲ್ಲಿರುವ ಮೂಲ ವೇತನ ಶ್ರೇಣಿಯಲ್ಲಿನ ಕನಿಷ್ಠ ವೇತನ ಹಂತಕ್ಕೆ 3 ವರ್ಷಗಳ ಅವಧಿಗೆ ಕೆಳಗಿಳಿಸಲಾಗಿದೆ. ದಂಡನಾವಧಿಯಲ್ಲಿ ಯಾವುದೇ ವಾರ್ಷಿಕ ವೇತನ ಬಡ್ತಿಯಾಗಲಿ ಅಥವಾ ಪದೋನ್ನತಿಯಾಗಲಿ ಪಡೆಯಲು ಅರ್ಹರಿರುವುದಿಲ್ಲ.

ii) ದಂಡನಾವಧಿಯ ಪೂರ್ಣಗೊಂಡ ನಂತರ ಇವರುಗಳ ವೇತನವನ್ನು ದಂಡನಾವಧಿಯ ಪೂರ್ವದಲ್ಲಿ ಪಡೆಯುತ್ತಿದ್ದ ಮೂಲ ವೇತನದಿಂದ ವಾರ್ಷಿಕ/ಸ್ಥಗಿತ ವೇತನ ಬಡ್ತಿಗಳನ್ನು ನೀಡತಕ್ಕದ್ದು.

iii) ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ ಮತ್ತು ಇವರುಗಳು ಪಡೆದ ಜೀವನಾಧಾರ ಭತ್ಯೆಗೆ ಸೀಮಿತಗೊಳಿಸಲಾಗಿದೆ."

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೆಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಘೋರ ಕರ್ತವ್ಯಚ್ಯುತಿ ನಿಷ್ಕಾಳಜಿತನ ಹಾಗೂ ದುರ್ನಡತೆಯನ್ನು ಪ್ರದರ್ಶಿಸಿರುವುದು. ಸಾಬೀತಾತಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 38 ಪೊಸಿಅ 2011 ಬೆಂಗಳೂರು, ದಿನಾಂಕ: 15-12-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಯುತರುಗಳಾದ ಪ್ರಕಾಶ ಜಿ. ಮುರಗೋಡ, ಪಿ.ಐ., ರಾಜ್ಯ ಗುಪ್ತ ವಾರ್ತೆ, ಗೋಕಾಕ, ಸಿ.ಬಿ. ಹಿರೇಗೌಡರ, ಸಿ.ಪಿ.ಸಿ. ಲಂಕೇಶ್ವರ ಪೊಲೀಸ್ ಠಾಣೆ, ಎಫ್.ಬಿ. ಮಡಿವಾಳರ, ಸಿಪಿಸಿ, ಮುಂಡರಗಿ ಪೊಲೀಸ್ ಠಾಣೆ, ಎಸ್.ಎಸ್. ಹೊಲಿ, ಎ.ಪಿ.ಸಿ. ಹಾಲಿ ನರಗುಂದ ಪೊಲೀಸ್ ಠಾಣೆ, ಹಾಗೂ ಬಿ.ಹೆಚ್. ಡಂಬಳ, ಸಿಪಿಸಿ, ಬೆಟ್ಟಗೆರೆ ಪೊಲೀಸ್ ಠಾಣೆ, ಇವರುಗಳು ಸರ್ಕಾರಕ್ಕೆ ಸಲ್ಲಿಸಿದ್ದ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್. ನಂ. 162

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತವು ಬ್ಯಾಂಕ್ ಇಂಡಿಯಾದಿಂದ ಪಡೆದಿರುವ ಸಾಲದ ಮೇಲಿನ ಸರ್ಕಾರದ ಖಾತರಿಯನ್ನು ಹಿಂದಕ್ಕೆ ಪಡೆಯುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಇ 221 ಸಸಕಾ 205, ದಿನಾಂಕ: 19-01-2006.
2) ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಪತ್ರ ಸಂಖ್ಯೆ: ಡಿಎಸ್‌ಕೆ/ಎಫ್‌ಐಎನ್/24/2011-12, ದಿನಾಂಕ: 15-09-2011.

**ಪ್ರಸ್ತಾವನೆ**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಎಂ.ಕೆ. ಹುಬ್ಬಳ್ಳಿ, ಬೆಳಗಾವಿ ಜಿಲ್ಲೆ, ಈ ಕಾರ್ಖಾನೆಗೆ ಕಬ್ಬು ಸರಬರಾಜು ಮಾಡಿದ ರೈತರಿಗೆ ಕಬ್ಬಿನ ಬಾಕಿಯನ್ನು ಪಾವತಿಸಲು ಹಾಗೂ ಕಾರ್ಖಾನೆಯ ನೌಕರರ / ಸಿಬ್ಬಂದಿ ವರ್ಗದ ವೇತನ ಬಾಕಿ ಮತ್ತು ಇತರೆ ವೆಚ್ಚಗಳನ್ನು ಭರಿಸುವ ಸಲುವಾಗಿ ಬ್ಯಾಂಕ್ ಆಫ್ ಇಂಡಿಯಾ, ಎಂ.ಕೆ. ಹುಬ್ಬಳ್ಳಿ ಶಾಖೆ, ಇವರಿಂದ 950.00 ಲಕ್ಷಗಳ ಮಧ್ಯಮಾವಧಿ ಸಾಲವನ್ನು ಕಾರ್ಖಾನೆಯ ಚರ ಮತ್ತು ಸ್ಥಿರ ಆಸ್ತಿಗಳನ್ನು ಅಡವಿಟ್ಟುಕೊಂಡು ಪಡೆಯಲು ಶೇ.1 ರಷ್ಟು ಖಾತರಿ ಕಮೀಷನನ್ನು ಪಾವತಿಸಬೇಕೆಂಬ ಷರತ್ತಿನೊಂದಿಗೆ ಸರ್ಕಾರಿ ಖಾತರಿಯನ್ನು ನೀಡಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಎಂ.ಕೆ. ಹುಬ್ಬಳ್ಳಿ, ಬೆಳಗಾವಿ ಜಿಲ್ಲೆ, ಇವರು ಬ್ಯಾಂಕ್ ಆಫ್ ಇಂಡಿಯಾದಿಂದ ಕ್ರಮಸಂಖ್ಯೆ: 1ರಲ್ಲಿ ಓದಲಾದ ಆದೇಶದ ಮೂಲಕ ಸರ್ಕಾರವು ನೀಡಿದ್ದ ಖಾತರಿಯ ಮೇರೆಗೆ ಪಡೆದಿದ್ದ ಮಧ್ಯಮಾವಧಿ ಸಾಲ ಮತ್ತು ಸದರಿ ಸಾಲದ ಮೇಲಿನ ಬಡ್ಡಿಯ ಕಂತುಗಳನ್ನು ಬ್ಯಾಂಕ್ ಆಫ್ ಇಂಡಿಯಾ, ಎಂ.ಕೆ. ಹುಬ್ಬಳ್ಳಿ ಶಾಖೆ, ಬೆಳಗಾವಿ ಜಿಲ್ಲೆ, ಇವರಿಗೆ ದಿನಾಂಕ: 21-06-2011 ರಂದು ಸಂಪೂರ್ಣವಾಗಿ ಮರುಪಾವತಿಸಿರುವುದಾಗಿ ಹಾಗೂ ಸದರಿ ಮಧ್ಯಮಾವಧಿ ಸಾಲವನ್ನು ಪಡೆಯಲು ಸರ್ಕಾರವು ನೀಡಿದ್ದ ಖಾತರಿಯನ್ನು ಹಿಂದಕ್ಕೆ ಪಡೆಯಲು ಕಬ್ಬು ಅಭಿವೃದ್ಧಿ ಆಯುಕ್ತರು ಹಾಗೂ ಸಕ್ಕರೆ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 101 ಸಸಕಾ 2011, ಬೆಂಗಳೂರು, ದಿನಾಂಕ: 27/12/2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಎಂ.ಕೆ ಹುಬ್ಬಳ್ಳಿ, ಬೆಳಗಾವಿ ಜಿಲ್ಲೆ, ಈ ಕಾರ್ಖಾನೆಯು ಕಬ್ಬು ಸರಬರಾಜು ಮಾಡಿದ ರೈತರಿಗೆ ಕಬ್ಬಿನ ಬಾಕಿಯನ್ನು ಪಾವತಿಸಲು ಹಾಗೂ ಕಾರ್ಖಾನೆಯ ನೌಕರರ / ಸಿಬ್ಬಂದಿ ವರ್ಗದ

ವೇತನ ಬಾಕಿ ಮತ್ತು ಇತರೆ ವೆಚ್ಚಗಳನ್ನು ಭರಿಸುವ ಸಲುವಾಗಿ ಬ್ಯಾಂಕ್ ಆಫ್ ಇಂಡಿಯಾ, ಎಂ.ಕೆ. ಹುಬ್ಬಳ್ಳಿ ಶಾಖೆ, ಇವರಿಂದ ಪಡೆದಿದ್ದ 950.00 ಲಕ್ಷಗಳ ಮಧ್ಯಮಾವಧಿ ಸಾಲಕ್ಕೆ ಸರ್ಕಾರವು ನೀಡಿದ್ದ ಖಾತರಿಯನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ಹಿಂದಕ್ಕೆ ಪಡೆಯಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ: 08-12-2011ರ ಅನಧಿಕೃತ ಟಿಪ್ಪಣಿ ಸಂಖ್ಯೆ: FD 431 Exp-2/2011 ರಲ್ಲಿ ನೀಡಿರುವ ಸಹಮತಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ರಾಮಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 101 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸಹಕಾರಿ ಸಕ್ಕರೆ)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ನಿಪ್ಪಾಣಿಯ ಶ್ರೀ ಹಾಲಸಿದ್ಧನಾಥ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತದಿಂದ ಬಾಕಿ ಇರುವ ಸಾಲ ₹1183.09 ಲಕ್ಷಗಳನ್ನು ಷೇರು ಬಂಡವಾಳವನ್ನಾಗಿ ಪರಿವರ್ತಿಸುವ ಬಗ್ಗೆ.

**ಓದಲಾಗಿದೆ:** ಕಬ್ಬು ಅಭಿವೃದ್ಧಿ ಆಯಕ್ತರ ಪತ್ರ ಸಂಖ್ಯೆ:ಡಿಎಸ್‌ಕೆ/ಎಫ್‌ಐಎನ್/ 55/2010-11, ದಿನಾಂಕ 08-03-2011.

**ಪ್ರಸ್ತಾವನೆ**

ಮೇಲೆ ಓದಲಾದ ಪತ್ರದಲ್ಲಿ 1994ರಿಂದ 1999ರ ಅವಧಿಯಲ್ಲಿ ಶ್ರೀ ಹಾಲಸಿದ್ಧನಾಥ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತವು ಸರ್ಕಾರಕ್ಕೆ ಪಾವತಿಸಲು ಬಾಕಿಯಿದ್ದ ಕಬ್ಬು ಖರೀದಿ ತೆರಿಗೆ ₹1183.09 ಲಕ್ಷಗಳನ್ನು ಬಡ್ಡಿ ರಹಿತ ಸಾಲವನ್ನಾಗಿ ಪರಿವರ್ತಿಸಲಾಗಿದ್ದು, ದಿನಾಂಕ 31-03-2010ರ ಅಂತ್ಯಕ್ಕೆ ₹1391.17 ಲಕ್ಷಗಳ ಕ್ರೋಢೀಕೃತ ನಷ್ಟದಲ್ಲಿದ್ದು, ಕಾರ್ಖಾನೆಯ ವಿಸ್ತರಣಾ ಕಾರ್ಯಕ್ಕೆ ಸುಮಾರು ₹32.00 ಕೋಟಿಗಳ ಅಂದಾಜು ಇರುವುದರಿಂದ, ಈಗ ಕಾರ್ಖಾನೆ ಕೋರಿರುವ ಕಬ್ಬು ಖರೀದಿ ತೆರಿಗೆ ಸಾಲದ ಮೊತ್ತ ₹1183.09 ಲಕ್ಷಗಳನ್ನು ಸರ್ಕಾರದ ಷೇರು ಬಂಡವಾಳವನ್ನಾಗಿ ಪರಿವರ್ತಿಸಿದಲ್ಲಿ ಕಾರ್ಖಾನೆಯು ವಿಸ್ತರಣೆ ಹಾಗೂ ಸಹ ವಿದ್ಯುತ್ ಘಟಕಕ್ಕೆ ಅಗತ್ಯ ಸಾಲವನ್ನು ಬ್ಯಾಂಕುಗಳಿಂದ ಪಡೆದುಕೊಳ್ಳಲು ಸಹಾಯಕವಾಗುತ್ತದೆ. ಇಲ್ಲವಾದಲ್ಲಿ ₹1183.09 ಲಕ್ಷದ ಹೆಚ್ಚುವರಿ ಹೊರೆಯಿಂದ ಕಾರ್ಖಾನೆಯು ಯಾವುದೇ ಸಾಲವನ್ನು ಬ್ಯಾಂಕುಗಳಿಂದ ಪಡೆದುಕೊಳ್ಳಲು ಸಾಧ್ಯವಾಗುವುದಿಲ್ಲ. ರಾಜ್ಯದಲ್ಲಿನ ಸಹಕಾರಿ ಸಕ್ಕರೆ ಕಾರ್ಖಾನೆಗಳನ್ನು ಲಾಭದಾಯಕವಾಗಿ ನಡೆಸಲು ಅನುಕೂಲವಾಗುವಂತೆ ಕಾರ್ಖಾನೆಗಳು ಗರಿಷ್ಠ ಪ್ರಮಾಣದ ಕಬ್ಬು ನುರಿಸುವ ಸಾಮರ್ಥ್ಯ ಹಾಗೂ ವಿದ್ಯುತ್ ಉತ್ಪಾದನೆಗೆ ಉತ್ತೇಜನ ನೀಡುವ ದೃಷ್ಟಿಯಿಂದ ಹಾಗೂ ಕಾರ್ಖಾನೆಯನ್ನು ಆಧುನೀಕರಣಗೊಳಿಸುವ ಸಲುವಾಗಿ ಮತ್ತು ಆರ್ಥಿಕವಾಗಿ ಸಬಲಗೊಳ್ಳಲು ಹಾಗೂ ಕಾರ್ಖಾನೆಯ ವ್ಯಾಪ್ತಿ ಪ್ರದೇಶದ ರೈತರ ಹಿತದೃಷ್ಟಿಯಿಂದ ₹1183.09 ಲಕ್ಷ ಕಬ್ಬು ಖರೀದಿ ತೆರಿಗೆ ಮೊತ್ತವನ್ನು ಸರ್ಕಾರದ ಷೇರು ಬಂಡವಾಳವನ್ನಾಗಿ ಪರಿವರ್ತಿಸುವಂತೆ ಮತ್ತು ಕಾರ್ಖಾನೆಯ ಬೇಡಿಕೆಯನ್ನು ಬೇರೆ ಕಾರ್ಖಾನೆಗೆ ಪೂರ್ವನಿದರ್ಶನ ವಹಿಸದಂತೆ ಷರತ್ತು ವಿಧಿಸಿ ಕಾರ್ಖಾನೆಯ ಕೋರಿಕೆಯನ್ನು ಪರಿಗಣಿಸಲು ಕಬ್ಬು ಅಭಿವೃದ್ಧಿ ಆಯುಕ್ತರು ಮತ್ತು ಸಕ್ಕರೆ ನಿರ್ದೇಶಕರು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಸಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಹಾಲಸಿದ್ಧನಾಥ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ನಿಪ್ಪಾಣಿ, ಬೆಳಗಾಂ ಜಿಲ್ಲೆ, ಇವರಿಂದ ಸರ್ಕಾರಕ್ಕೆ ಬರಬೇಕಾಗಿರುವ ಕಬ್ಬು ಖರೀದಿ ತೆರಿಗೆ ಬಾಕಿ ಮೊತ್ತ ₹1183.09 ಲಕ್ಷಗಳನ್ನು ಸರ್ಕಾರದ ಷೇರು ಬಂಡವಾಳವನ್ನಾಗಿ ಪರಿವರ್ತಿಸಲು ತೀರ್ಮಾನಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 18 ಸಸಕಾ 2011, ಬೆಂಗಳೂರು, ದಿನಾಂಕ: 15-12-2011**

ಶ್ರೀ ಹಾಲಸಿದ್ಧನಾಥ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ನಿಪ್ಪಾಣಿ, ಬೆಳಗಾಂ ಜಿಲ್ಲೆ, ಇವರಿಂದ ಸರ್ಕಾರಕ್ಕೆ ಬರಬೇಕಾಗಿರುವ ಕಬ್ಬು ಖರೀದಿ ತೆರಿಗೆ ಬಾಕಿ ಮೊತ್ತ 1183.09 (ರೂಪಾಯಿ ಹನ್ನೊಂದು ಕೋಟಿ ಎಂಭತ್ತೂರು ಲಕ್ಷದ ಒಂಭತ್ತು ಸಾವಿರ ಮಾತ್ರ) ಲಕ್ಷಗಳನ್ನು ಸರ್ಕಾರದ ಷೇರು ಬಂಡವಾಳವನ್ನಾಗಿ ಪರಿವರ್ತಿಸಿ ಆದೇಶಿಸಲಾಗಿದೆ.

ಈ ಆದೇಶವು ಕರ್ನಾಟಕ ಸರ್ಕಾರ (ಕಾರ್ಯಕಲಾಪಗಳ ನಿರ್ವಹಣೆ) ನಿಯಮ 1977ರ ನಿಯಮ 17ರಡಿಯ ಉಪನಿಯಮ (2)ರ ವ್ಯಾಪ್ತಿಯಲ್ಲಿ ಬರುವುದಿದ್ದು, ಅದರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ರಾಮಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 102 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸಹಕಾರಿ ಸಕ್ಕರೆ)

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿನ ಯೋಜನೇತರ ಲೆಕ್ಕಶೀರ್ಷಿಕೆ ಅಡಿಯಲ್ಲಿನ 101 ಹಂಗಾಮಿ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**

1) ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 186 ಪಸಸೇ 2010, ದಿನಾಂಕ: 15-05-2010.
2) ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 167 ಪಸಸೇ 2008, ದಿನಾಂಕ: 22-12-2010.
3) ಪತ್ರ ಸಂಖ್ಯೆ: ಆಪಸಂ/ಸಿಬ್ಬಂದಿ-1(ಅ)/ವಿವ-2/ 2006-07/ 10-11, ದಿನಾಂಕ: 26-09-2011.

**ಪ್ರಸ್ತಾವನೆ**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಆದೇಶದಲ್ಲಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಯೋಜನೇತರ ಲೆಕ್ಕಶೀರ್ಷಿಕೆಯಲ್ಲಿನ ವಿವಿಧ ವೃಂದದ ಒಟ್ಟು 990 ವಿವಿಧ ಹಂಗಾಮಿ ಹುದ್ದೆಗಳನ್ನು ದಿನಾಂಕ: 01-04-2010 ರಿಂದ ದಿನಾಂಕ: 31-03-2011 ರವರೆಗೆ ಒಂದು ವರ್ಷದ ಅವಧಿಗೆ ಮುಂದುವರಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (2)ರ ಆದೇಶದಲ್ಲಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿನ ವಿವಿಧ ಯೋಜನೇತರ ಲೆಕ್ಕಶೀರ್ಷಿಕೆ ಅಡಿ ಇರುವ 1004 ಹಂಗಾಮಿ ಹುದ್ದೆಗಳಲ್ಲಿ ಖಾಲಿ ಇರುವ 118 ವಿವಿಧ ವರ್ಗದ ಹುದ್ದೆಗಳನ್ನು ಹೊರತುಪಡಿಸಿ, ಉಳಿದ 886 ಹುದ್ದೆಗಳನ್ನು ಮಾತ್ರ ಖಾಯಂ ಆಗಿ ಮುಂದುವರೆಸಲು ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (3)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಖಾಯಂಗೊಳಿಸಿರುವ ಯೋಜನೇತರ ಹುದ್ದೆಗಳಲ್ಲಿ ಖಾಲಿಯಿರುವ ಹುದ್ದೆಗಳು ಭರ್ತಿಯಾಗುತ್ತಿದ್ದು ಮುಂದುವರಿಕೆ ಆದೇಶವಿಲ್ಲದೇ ಸದರಿ ಹುದ್ದೆಗಳಿಗೆ ವೇತನ ಪಾವತಿಸಲು ಸಾಧ್ಯವಾಗುತ್ತಿಲ್ಲವೆಂದು ತಿಳಿಸಿರುತ್ತಾರೆ. ಯೋಜನೇತರ ಲೆಕ್ಕಶೀರ್ಷಿಕೆಯಡಿ ಖಾಲಿ ಇರುವ 101 ಹಂಗಾಮಿ ಹುದ್ದೆಗಳು ದಿನಾಂಕ: 31-03-2011 ರವರೆಗೆ ಮುಂದುವರಿಕೆ ಆದೇಶ ಹೊಂದಿರುವುದರಿಂದ ಇಲಾಖಾ ಹಿತದೃಷ್ಟಿಯಿಂದ ಸದರಿ ಹುದ್ದೆಗಳನ್ನು 2011-12ನೇ ಸಾಲಿಗೆ ಮುಂದುವರೆಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಪ್ರಸ್ತಾಪಿತ 101 ಹಂಗಾಮಿ ಹುದ್ದೆಗಳು ಸಾಂಖ್ಯಿಕ ಸಂಗ್ರಹ ಮತ್ತು ಅಂಕಿ ಅಂಶ ಕಚೇರಿ ರಾಜ್ಯ ವಲಯದ ಜಾನುವಾರು ಕ್ಷೇತ್ರಗಳಲಿದ್ದು, ಸದರಿ ಹುದ್ದೆಗಳನ್ನು ಮಿಶ್ರತಳಿಗಳ ವೀರ್ಯ ಸಂಸ್ಕರಣೆ ರಾಸುಗಳ ಕೃತಕ ಗರ್ಭಧಾರಣೆಗೆ ಬೇಕಾದ ವೀರ್ಯ ಉತ್ಪಾದನೆಗೆ, ತಳಿಗಳ ಸಂರಕ್ಷಣೆ, ವೀರ್ಯ ನಳಿಕೆಗಳನ್ನು ಸರಬರಾಜು ಮಾಡಲು, ರೈತರಿಗೆ ಪಶುಪಾಲನೆ ಬಗ್ಗೆ ತರಬೇತಿ ನೀಡುವುದು. ಹೈನುಗಾರಿಕೆ ಶಿಕ್ಷಣಾರ್ಥಿಗಳಿಗೆ ತರಬೇತಿ, ಜಾನುವಾರು ಹಾಗೂ ಕಕ್ಕುಟ ತಳಿಗಳ ಸಂವರ್ಧನಾ ಚಟುವಟಿಕೆಗಳನ್ನು ನಿರ್ವಹಿಸಲು ಹಾಗೂ ಮೇವು ಬೆಳೆಗಳ ಮಿನಿಕಿಟ್ ಉತ್ಪಾದನೆ, ಸುಧಾರಿತ ತಳಿಗಳ ಹುಲ್ಲಿನ ಬೇರು, ಬೀಜವನ್ನು ರೈತರಿಗೆ ಸರಬರಾಜು ಮಾಡಲು, ಪ್ರಾತ್ಯಕ್ಷಿಕೆಗಳನ್ನು ಪ್ರದರ್ಶಿಸಲು, ಇಲಾಖೆಯ ಅಭಿವೃದ್ಧಿ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಮತ್ತು ಜಾನುವಾರು ಕ್ಷೇತ್ರಗಳ ವಿವಿಧ ಕೆಲಸಗಳನ್ನು ಕ್ರಮಬದ್ಧವಾಗಿ ನಿರ್ವಹಿಸುವ ಸಲುವಾಗಿ ಮುಂದುವರೆಸುವುದು ಅವಶ್ಯಕವಾಗಿರುತ್ತದೆ. 101 ಹಂಗಾಮಿ ಹುದ್ದೆಗಳನ್ನು ದಿನಾಂಕ: 31-03-2011ರವರೆಗೆ ಮಾತ್ರ ಮುಂದುವರೆಸಲು ಮಂಜೂರಾತಿ ಇದ್ದು, ಸದರಿ ಹುದ್ದೆಗಳು ಭರ್ತಿಯಾಗುತ್ತಿರುವುದರಿಂದ ಅವುಗಳನ್ನು 2011-12ನೇ ಸಾಲಿನಲ್ಲಿಯೂ ಮುಂದುವರೆಸಲು ಮಂಜೂರಾತಿ ನೀಡಬೇಕಾಗುತ್ತದೆ. ಇಲ್ಲದಿದ್ದಲ್ಲಿ ಆ ಲೆಕ್ಕಶೀರ್ಷಿಕೆಗಳಲ್ಲಿ ಕಾರ್ಯನಿರ್ವಹಿಸುವ ಅಧಿಕಾರಿ / ನೌಕರರಿಗೆ ವೇತನ ಪಾವತಿಸಲು ತೊಂದರೆಯಾಗುತ್ತದೆ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿದ ಸರ್ಕಾರ, ಇಲಾಖಾ ಕಾರ್ಯಕ್ರಮಗಳ ಹಿತದೃಷ್ಟಿಯಿಂದ ಯೋಜನೇತರ ಲೆಕ್ಕಶೀರ್ಷಿಕೆ ಅಡಿ ಇರುವ ವಿವಿಧ ವೃಂದದ ಒಟ್ಟು 101 ಹಂಗಾಮಿ ಹುದ್ದೆಗಳನ್ನು ದಿನಾಂಕ: 01-04-201 ರಿಂದ ದಿನಾಂಕ: 31-03-2012ರವರೆಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 262 ಪಸಸೇ 2011, ಬೆಂಗಳೂರು, ದಿನಾಂಕ: 7ನೇ ಡಿಸೆಂಬರ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ಇಲಾಖೆಯ ಅಭಿವೃದ್ಧಿ ಯೋಜನೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಹಾಗೂ ಜಾನುವಾರು ಕ್ಷೇತ್ರಗಳ ಸಮರ್ಪಕ ನಿರ್ವಹಿಸಲು ಒಟ್ಟಾರೆ ಇಲಾಖಾ ಹಿತದೃಷ್ಟಿಯಿಂದ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ವಿವಿಧ ಯೋಜನೇತರ ಲೆಕ್ಕಶೀರ್ಷಿಕೆ ಅಡಿ ಇರುವ ಈ ಕೆಳಕಂಡ 101 (ಒಂದು ನೂರಾ ಒಂದು) ಹಂಗಾಮಿ ಹುದ್ದೆಗಳನ್ನು ಮಾತ್ರ ದಿನಾಂಕ: 01-04-2011ರಿಂದ ದಿನಾಂಕ: 31-03-2012ರವರೆಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಸಂಸ್ಥೆಯ ಹೆಸರು | ಲೆಕ್ಕ ಶೀರ್ಷಿಕೆ ಯೋಜನೇತರ | ಹುದ್ದೆಯ ಪದನಾಮ | ಹುದ್ದೆ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| (1) | ಜಂಟಿ ನಿರ್ದೇಶಕರ (ಅಂಕಿ-ಅಂಶ) ಕಛೇರಿ, ಬೆಂಗಳೂರು. | 2403-00-113-0-01 | ಸಹಾಯಕ ನಿರ್ದೇಶಕರು | 02 |
| | | | ಸಾಂಖ್ಯಿಕ ಅಧಿಕಾರಿ | 01 |
| | | | ಸಾಂಖ್ಯಿಕ ನಿರೀಕ್ಷಕರು | 04 |
| | | | ಪಶುವೈದ್ಯಕೀಯ ಪರೀಕ್ಷಕರು | 04 |
| (2) | ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಧಾರವಾಡ. | 2403-800-0-23 | ಡಿ-ದರ್ಜೆ ನೌಕರರು | 01 |
| (3) | ಕೇಂದ್ರೀಯ ವೀರ್ಯ ಸಂಕಲನಾ ಕೇಂದ್ರ, ಧಾರವಾಡ. | 2403-00-102-01-06 | ಪಶುವ್ವದ್ಯಕೀಯ ಪರೀಕ್ಷಕರು | 01 |
| | | | ಡಿ-ದರ್ಜೆ ನೌಕರರು | 02 |
| (4) | ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಕುರಿಕಪ್ಪಿ, ಬಳ್ಳಾರಿ ಜಿಲ್ಲೆ. | 2403-800-0-23 | ವಾಹನ ಚಾಲಕರು | 01 |
| (5) | ರಾಜ್ಯ ವೀರ್ಯ ಸಂಸ್ಕರಣಾ ಕೇಂದ್ರ, ಹೆಸರಘಟ್ಟ, ಬೆಂಗಳೂರು. | 2403-800-0-23 | ವಾಹನ ಚಾಲಕರು | 01 |
| (6) | ಜರ್ಸಿ ತಳಿ ಸಂವರ್ಧನಾ ಕ್ಷೇತ್ರ, ಕೂಡಿಗೆ, ಕೊಡಗು ಜಿಲ್ಲೆ. | 2403-00-102-01-06 | ಪಶುವೈದ್ಯಾಧಿಕಾರಿ | 01 |
| | | | ಅಧೀಕ್ಷಕರು | 01 |
| | | | ಸಹಾಯಕ ಕೃಷಿ ಅಧಿಕಾರಿ | 01 |
| | | | ಪಶುವೈದ್ಯಕೀಯ ಪರೀಕ್ಷಕರು | 07 |
| | | | ಕ್ಷೇತ್ರ ಸಹಾಯಕರು | 02 |
| | | | ಡಿ- ದರ್ಜೆ ನೌಕರರು | 25 |
| (7) | ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, (ವಿಸ್ತರಣೆ ಮತ್ತು ತರಬೇತಿ) ಕೊಯ್ಲಾ, ದಕ್ಷಿಣ ಕನ್ನಡ ಜಿಲ್ಲೆ. | 2403-00-800-0-23 | ಕೃಷಿ ಕ್ಷೇತ್ರ ಸಹಾಯಕರು | 01 |
| | | | ಹೈನು ಸಹಾಯಕರು | 01 |
| | | | ವಾಹನ ಚಾಲಕರು | 01 |
| | | | ಪಶುವೈದ್ಯಕೀಯ ಪರೀಕ್ಷಕರು | 01 |
| | | | ಪ್ರಥಮ ದರ್ಜೆ ಸಹಾಯಕರು | 01 |
| | | 2403-00-109-0-01 | ಪಶು ವೈದ್ಯಾಧಿಕಾರಿ | 01 |

| | | | | |
|---|---|---|---|---|
| (8) | ಹಂದಿ ತಳಿ ಸಂವರ್ಧನಾ ಕೇಂದ್ರ, ಕೊಯ್ಲಾ, ದಕ್ಷಿಣ ಕನ್ನಡ ಜಿಲ್ಲೆ. | 2403–0–105–0–01 | ಪಶುವೈದ್ಯಾಧಿಕಾರಿ | 01 |
| | | | ಪಶುವೈದ್ಯಕೀಯ ಪರೀಕ್ಷಕರು | 01 |
| | | | ವಾಹನ ಚಾಲಕರು | 01 |
| (9) | ಖಿಲಾರಿ ತಳಿ ಸಂವರ್ಧನಾ ಕೇಂದ್ರ, ಬಂಕಾಪುರ ಹಾವೇರಿ ಜಿಲ್ಲೆ. | 2403–00–800–00–23 | ವಾಹನ ಚಾಲಕರು | 01 |
| | | | ಡಿ–ದರ್ಜೆ | 01 |
| (10) | ರಾಜ್ಯ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಹೆಸರಘಟ್ಟ. ಬೆಂಗಳೂರು. | 243–00–800–00–23 | ಶೀಘ್ರಲಿಪಿಗಾರರು | 01 |
| | | | ಪಶುವೈದ್ಯಾಧಿಕಾರಿ | 05 |
| | | | ಕೃಷಿ ಸಹಾಯಕರು | 01 |
| | | | ಪ್ರಯೋಗ ಶಾಲೆ ತಾಂತ್ರಿಕರು | 01 |
| | | | ಹಿರಿಯ ವಾಹನ ಚಾಲಕರು | 01 |
| | | | ವಾಹನ ಚಾಲಕರು | 03 |
| | | | ಅಸಿಸ್ಟೆಂಟ್ ಮೆಕ್ಯಾನಿಕ್ | 01 |
| | | | ಪ್ರಯೋಗ ಶಾಲೆ ಪರಿಚಾರಕ | 01 |
| | | | ಮೇಸ್ತ್ರಿ | 01 |
| | | | ಅಡುಗೆಯವರು(ಕುಕ್) | 01 |
| | | | ಕಾವಲುಗಾರರು | 02 |
| | | | ಡಿ–ದರ್ಜೆ ನೌಕರರು (ಕೃಷಿ ಕೆಲಸಗಾರರು) | 14 |
| (11) | ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರಘಟ್ಟ (ವಿಸ್ತರಣೆ ಮತ್ತು ತರಬೇತಿ) ಬೆಂಗಳೂರು) | 2403–00–800–0–23 | ಪ್ರಥಮ ದರ್ಜೆ ಸಹಾಯಕರು | 02 |
| | | 2403–00–0–109–0–01 | ಪಶುವೈದ್ಯಾಧಿಕಾರಿ | 01 |
| | | | ದ್ವಿತೀಯ ದರ್ಜೆ ಸಹಾಯಕರು | 01 |
| | | | ಒಟ್ಟು | 101 |

ಸದರಿ 101 ಹಂಗಾಮಿ ಹುದ್ದೆಗಳನ್ನು ಮುಂದುವರೆಸಲು ತಗಲುವ ವೆಚ್ಚವನ್ನು 2011–12ನೇ ಸಾಲಿನಲ್ಲಿ ಮೇಲ್ಕಂಡ ಅಂಕಣ –3ರಲ್ಲಿ ನಮೂದಿಸಿರುವ ವಿವಿಧ ಯೋಜನೇತರ ಲೆಕ್ಕಶೀರ್ಷಿಕೆಗಳಿಂದಲೇ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10–07–1996ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ವಿತ್ತಾಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಎಂ.ಪಿ. ನಾಗರಾಜ
ಪೀಠಾಧಿಕಾರಿ–2
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
(ಪಶುಸಂಗೋಪನೆ–ಎ).

ಪಿ.ಆರ್. ನಂ. 103

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ:** ಮೀನು/ಸಿಗಡಿ ಕೃಷಿಕರ ಅಭಿವೃದ್ಧಿ ಸಂಸ್ಥೆಗಳಡಿ ಕಾರ್ಯ ನಿರ್ವಹಿಸುತ್ತಿದ್ದ ಮೀನುಮರಿ ಉತ್ಪಾದನಾ ಕೇಂದ್ರಗಳನ್ನು ಸಿಬ್ಬಂದಿಯೊಂದಿಗೆ ಮೀನುಗಾರಿಕೆ ಇಲಾಖೆಗೆ ವರ್ಗಾಯಿಸುವ ಕುರಿತು.

**ಓದಲಾಗಿದೆ:**
1) ಆದೇಶ ಸಂಖ್ಯೆ: ಪಸಂಮೀ 210 ಮೀಇಸೇ/2010, ದಿನಾಂಕ: 30–06–2011.
2) ಪತ್ರ ಸಂಖ್ಯೆ: ಸಿಬ್ಬಂದಿ (2)//1/2000–01, ದಿನಾಂಕ: 08–03–2011. 29–10–2011 ಮತ್ತು ದಿನಾಂಕ: 25–11–2011.
3) ಆದೇಶ ಸಂಖ್ಯೆ: ಎಫ್‌ಡಿ/82/ಬಿಆರ್‌ಎಸ್/2011, ದಿನಾಂಕ: 15–10–2011.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ, ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆಗಳಿಗೆ ಕೇಂದ್ರ ಸರ್ಕಾರವು ಅಭಿವೃದ್ಧಿ ವೆಚ್ಚಗಳ ಮೇಲೆ ಮಾತ್ರ ಶೇ. 75 ರಷ್ಟು ವೆಚ್ಚವನ್ನು ಭರಿಸುತ್ತಿದ್ದು, ಉಳಿದ ಶೇ. 25ರಷ್ಟು ವೆಚ್ಚವನ್ನು ಹಾಗೂ ಸಿಬ್ಬಂದಿವೇತನ ಮತ್ತು ಇತರ ಆಡಳಿತಕ್ಕೆ ಸಂಬಂಧಿಸಿದ ಎಲ್ಲಾ ವೆಚ್ಚಗಳ ಶೇ.100ರಷ್ಟನ್ನು ರಾಜ್ಯ ಸರ್ಕಾರವೇ ಭರಿಸುತ್ತಿದ್ದು, ಕೇಂದ್ರ ಸರ್ಕಾರವು 11ನೇ ಪಂಚವಾರ್ಷಿಕ ಯೋಜನೆಯಲ್ಲಿ ಯೋಜನಾ ಅನುಷ್ಠಾನದ ಮಾರ್ಗಸೂಚಿಗಳನ್ನು ಪರಿಷ್ಕರಿಸುತ್ತಾ ಸದರಿ ಯೋಜನೆಯಡಿ ತರಬೇತಿ ನೀಡುವ ಘಟಕವನ್ನು ಕೈಬಿಟ್ಟಿರುತ್ತಾರೆ. ಈ ಹಿನ್ನೆಲೆಯಲ್ಲಿ ಸದರಿ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅಧಿಕಾರಿ/ನೌಕರರನ್ನು ರಾಜ್ಯವಲಯಕ್ಕೆ ತರಲು ಉದ್ದೇಶಿಸಿದ್ದು, ಅದರಂತೆ ಹೊಸದಾಗಿ ರಚಿಸಲಾಗಿರುವ 07 ಜಿಲ್ಲೆಗಳಾದ ದಾವಣಗೆರೆ, ಹಾವೇರಿ, ಚಾಮರಾಜನಗರ, ಬಾಗಲಕೋಟೆ, ಗದಗ, ಕೊಪ್ಪಳ ಮತ್ತು ಉಡುಪಿ ಇವುಗಳಲ್ಲಿ ಮೀನುಗಾರಿಕೆ ಸಂಪನ್ಮೂಲ ಅಭಿವೃದ್ಧಿಗೆ ವಿಪುಲ ಅವಕಾಶ ಇರುವ ಕಾರಣ ಜಿಲ್ಲಾ ಮಟ್ಟದ ಕಛೇರಿಯನ್ನು ಪ್ರಾರಂಭಿಸಲು ಮೀನುಗಾರಿಕೆ ಇಲಾಖೆಯ ವ್ಯಾಪ್ತಿಯಡಿ ಕಾರ್ಯನಿರ್ವಹಿಸುತ್ತಿರುವ ಮೀನು/ಸಿಗಡಿ ಕೃಷಿಕರ ಅಭಿವೃದ್ಧಿ ಸಂಸ್ಥೆಗಳಲ್ಲಿರುವ ಹುದ್ದೆಗಳಲ್ಲಿ 50 ಹುದ್ದೆಗಳನ್ನು ಸದರಿ ಜಿಲ್ಲೆಗಳಿಗೆ ಸ್ಥಳಾಂತರಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಮೀನುಗಾರಿಕೆ ನಿರ್ದೇಶಕರ ಪತ್ರಗಳಲ್ಲಿ, ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆಗಳ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಮೀನುಮರಿ ಉತ್ಪಾದನಾ ಕೇಂದ್ರಗಳು ಈ ಸಂಸ್ಥೆಗಳು ಅಸ್ತಿತ್ವಕ್ಕೆ ಬರುವ ಮೊದಲು ಮೀನುಗಾರಿಕೆ ಇಲಾಖೆಯಡಿ ಕಾರ್ಯನಿರ್ವಹಿಸುತ್ತಿದ್ದವೆಂದು, ಈ ಕೇಂದ್ರಗಳನ್ನು ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆಗಳು ಅಸ್ತಿತ್ವಕ್ಕೆ ಬಂದ ನಂತರ ಸಿಬ್ಬಂದಿ ಸಮೇತ ಅವುಗಳ

ನಿಯಂತ್ರಣಕ್ಕೊಳಪಡಿಸಿ ವರ್ಗಾಯಿಸಲಾಗಿತ್ತೆಂದು ತಿಳಿಸಿರುತ್ತಾರೆ. ಆದರೆ, ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆಗಳಲ್ಲಿನ ಹುದ್ದೆಗಳನ್ನು ಹೊಸದಾಗಿ ಸೃಜನೆಗೊಂಡ ಜಿಲ್ಲೆಗಳಿಗೆ ಸ್ಥಳಾಂತರಿಸುವುದರಿಂದ, ಮೀನುಮರಿ ಉತ್ಪಾದನಾ ಕೇಂದ್ರಗಳನ್ನು ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆಯ ವ್ಯಾಪ್ತಿಯಿಂದ ಮೀನುಗಾರಿಕೆ ಇಲಾಖೆಗೆ ಹಿಂತೆಗೆದುಕೊಂಡು ಇಲಾಖೆ ವತಿಯಿಂದ ಸದರಿ ಕೇಂದ್ರಗಳನ್ನು ಮುಂದುವರೆಸಬೇಕಾಗಿದ್ದು, ಆ ಕೇಂದ್ರಗಳಲ್ಲಿರುವ ಹುದ್ದೆಗಳನ್ನು ಸಿಬ್ಬಂದಿಯೊಂದಿಗೆ ರಾಜ್ಯವಲಯದಡಿ ತಂದು ಸಂಬಂಧಪಟ್ಟ ಮೀನುಗಾರಿಕೆ ಉಪ ನಿರ್ದೇಶಕರುಗಳ ನಿಯಂತ್ರಣಕ್ಕಳಪಡಿಸಬೇಕಾಗಿದೆ ಎಂದು ವರದಿ ಮಾಡಿರುತ್ತಾರೆ.

ಮುಂದುವರೆದು, ಮೀನು/ಸಿಗಡಿ ಕೃಷಿಕರ ಅಭಿವೃದ್ಧಿ ಸಂಸ್ಥೆಗಳಡಿ ಕಾರ್ಯನಿರ್ವಹಿಸುತ್ತಿದ್ದ ಮೀನುಮರಿ ಉತ್ಪಾದನಾ ಕೇಂದ್ರಗಳಲ್ಲಿದ್ದ 40 ಹುದ್ದೆಗಳ ಪೈಕಿ 09 ವಾಹನ ಚಾಲಕ ಹಾಗೂ ಕಛೇರಿ ಸೇವಕ ಹುದ್ದೆಗಳು ಹೊಸ ಜಿಲ್ಲೆಗಳಿಗೆ ಸ್ಥಳಾಂತರಿಸಲಾದ ದಿನಾಂಕ: 30-06-2011ರ ಆದೇಶದಲ್ಲಿ ಸೇರಿಕೊಂಡಿರುವುದರಿಂದ, ಇನ್ನು ಉಳಿದ 31 ಹುದ್ದೆಗಳನ್ನು ಮಾತ್ರ ಇಲಾಖೆಗೆ ವರ್ಗಾಯಿಸಬೇಕೆಂದು ಮೀನುಗಾರಿಕೆ ನಿರ್ದೇಶಕರು ಕೋರಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಆದೇಶದಲ್ಲಿ, ಮೀನು/ಸಿಗಡಿ ಕೃಷಿಕರ ಅಭಿವೃದ್ಧಿ ಸಂಸ್ಥೆಗಳಡಿ ಕಾರ್ಯನಿರ್ವಹಿಸುತ್ತಿದ್ದ ಮೀನುಮರಿ ಉತ್ಪಾದನಾ ಕೇಂದ್ರಗಳನ್ನು ಮೀನುಗಾರಿಕೆ ಇಲಾಖೆಯ ವಶಕ್ಕೆ ಒಳಪಡಿಸಿ ಆ ಕೇಂದ್ರಗಳಲ್ಲಿ ಕಾರ್ಯನಿವಹಿಸುತ್ತಿರುವ ಸಿಬ್ಬಂದಿಯನ್ನು ರಾಜ್ಯವಲಯದಡಿ ತಂದು ಆ ಸಿಬ್ಬಂದಿಯ ವೇತನ ಮತ್ತು ಇತರೆ ವೆಚ್ಚಗಳನ್ನು ಭರಿಸಲು 2011-12ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2405-00-196-06-02 (ಯೋಜನೆ) ಅಡಿ ಉಳಿತಾಯವಾಗುವ ಅನುದಾನದಿಂದ ₹63.85 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ 2405-00-001-0-01 (ಯೋಜನೆ)ರಡಿಗೆ ಮರುಹೊಂದಾಣಿಕೆ ಮಾಡಲಾಗಿದೆ.

ಮೀನುಗಾರಿಕೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಪಸಂಮೀ 37 ಮೀಇಸೇ 2011, ಬೆಂಗಳೂರು ದಿನಾಂಕ: 22-12-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಪ್ರಸ್ತುತ ಮೀನು/ಸಿಗಡಿ ಕೃಷಿಕರ ಅಭಿವೃದ್ಧಿ ಸಂಸ್ಥೆಗಳ ನಿಯಂತ್ರಣದಲ್ಲಿರುವ ಮೀನುಮರಿ ಉತ್ಪಾದನಾ ಕೇಂದ್ರಗಳನ್ನು ಈ ಆದೇಶದ ಅನುಬಂಧದಲ್ಲಿ ನಮೂದಿಸಿರುವ 31 ಸಿಬ್ಬಂದಿಗಳ ಸಮೇತ ಮೀನುಗಾರಿಕೆ ಇಲಾಖೆಯ ರಾಜ್ಯವಲಯಕ್ಕೆ ಸ್ಥಳಾಂತರಿಸಿ ಆದೇಶಿಸಿದೆ.

ಸದರಿ 31 ಅಧಿಕಾರಿ/ಸಿಬ್ಬಂದಿಗಳಿಗೆ ತಗಲುವ ವೇತನ ಮತ್ತು ಇತರೆ ವೆಚ್ಚಗಳನ್ನು ಆದೇಶ ಸಂಖ್ಯೆ: ಎಫ್‌ಡಿ/82/ಬಿಆರ್ ಎಸ್/2011, ದಿನಾಂಕ:15-10-2011ರ ಪ್ರಕಾರ ಈ ಕೆಳಗಿನ ಲೆಕ್ಕ ಶೀರ್ಷಿಕೆಯಡಿ ಮರುಹೊಂದಾಣಿಕೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು.

ಕ್ಷೇತ್ರ ಅಧಿಕಾರಿಗಳು (ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ಹುದ್ದೆಗಳಿಗೆ ಸಂಬಂಧಿಸಿದಂತೆ ವೇತನ ಮತ್ತು ಇತರೆ ವೆಚ್ಚಗಳನ್ನು 2011-12ನೇ ಸಾಲಿನ ಲೆಕ್ಕ ಶೀರ್ಷಿಕೆ 2405-ಮೀನುಗಾರಿಕೆ-00-001-ಆಡಳಿತ ಮತ್ತು ನಿರ್ದೇಶನ-0-01-ಮೀನುಗಾರಿಕೆ ಇಲಾಖೆಯ ನಿರ್ದೇಶಕರು-002-ವೇತನ ಅಧಿಕಾರಿಗಳು (ಯೋಜನೆ)ರಡಿ ₹12.10 ಲಕ್ಷಗಳನ್ನು, ಸಿಬ್ಬಂದಿಗಳ ವೇತನ ಮತ್ತು ಇತರೆ ವೆಚ್ಚಗಳಿಗೆ ಲೆಕ್ಕ ಶೀರ್ಷಿಕೆ 2405-ಮೀನುಗಾರಿಕೆ-00-001-ಆಡಳಿತ ಮತ್ತು ನಿರ್ದೇಶನ-0-01-ಮೀನುಗಾರಿಕೆ ಇಲಾಖೆಯ ನಿರ್ದೇಶಕರು-003-ವೇತನ ಸಿಬ್ಬಂದಿ (ಯೋಜನೆ)ರಡಿ ₹25.73 ಲಕ್ಷಗಳನ್ನು, ತುಟ್ಟಿಭತ್ಯೆಗಳಿಗೆ ಲೆಕ್ಕ ಶೀರ್ಷಿಕೆ 2405-ಮೀನುಗಾರಿಕೆ-00-001-ಆಡಳಿತ ಮತ್ತು ನಿರ್ದೇಶನ-0-01-ಮೀನುಗಾರಿಕೆ ಇಲಾಖೆಯ ನಿರ್ದೇಶಕರು-011-ತುಟ್ಟಿಭತ್ಯೆ (ಯೋಜನೆ)ರಡಿ ₹23.64 ಲಕ್ಷಗಳನ್ನು ಮತ್ತು ಇತರೆ ಭತ್ಯೆಗಳಿಗೆ ಲೆಕ್ಕ ಶೀರ್ಷಿಕೆ 2405- ಮೀನುಗಾರಿಕೆ-00-001-ಆಡಳಿತ ಮತ್ತು ನಿರ್ದೇಶನ-0-01-ಮೀನುಗಾರಿಕೆ ಇಲಾಖೆಯ ನಿರ್ದೇಶಕರು-014-ಇತರೆ ಭತ್ಯೆ (ಯೋಜನೆ)ರಡಿ ₹2.38 ಲಕ್ಷಗಳನ್ನು ಹೀಗೆ ಒಟ್ಟಾರೆ ಮರುಹೊಂದಾಣಿಕೆ ಮಾಡಿದ ₹63.85 ಲಕ್ಷ (ರೂಪಾಯಿ ಅರವತ್ತುಮೂರು ಲಕ್ಷದ ಎಂಬತ್ತೈದು ಸಾವಿರಗಳು ಮಾತ್ರ)ಗಳ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/432/ವೆಚ್ಚ-4/2011, ದಿನಾಂಕ: 09-11-2011ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಡಿ.ಎಂ. ರಾಜಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ(ಮೀ)

**ಆದೇಶ ಸಂಖ್ಯೆ: ಪಸಂಮೀ/37/ಮೀಇಸೇ/2011, ಬೆಂಗಳೂರು ದಿನಾಂಕ: 22-12-2011ರ ಅನುಬಂಧ**

**ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆ ನಿಯಂತ್ರಣದಲ್ಲಿದ್ದ ಮೀನುಮರಿ ಉತ್ಪಾದನಾ ಕೇಂದ್ರಗಳನ್ನು ಹುದ್ದೆಗಳೊಂದಿಗೆ ಮೀನುಗಾರಿಕೆ ಇಲಾಖೆಯ ರಾಜ್ಯವಲಯಕ್ಕೆ ಸ್ಥಳಾಂತರಿಸಿ ಮುಂದುವರೆಸಲಾದ ಹುದ್ದೆಗಳ ವಿವರ**

| ಕ್ರ. ಸಂ. | ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆ ಹೆಸರು ಮತ್ತು ಸ್ಥಳ | ಮಂಜೂರಾದ ಹಾಗೂ ಹಾಲಿ ಮುಂದುವರೆಯುತ್ತಿರುವ ಹುದ್ದೆಗಳು | ಮೀನುಗಾರಿಕೆ ಇಲಾಖೆಗೆ ಸ್ಥಳಾಂತರಿಸಿ ಮುಂದುವರೆಸಲಾದ ಹುದ್ದೆಗಳು | ಹುದ್ದೆ ಸಂಖ್ಯೆ | ಮೀನುಗಾರಿಕೆ ಇಲಾಖೆಯಲ್ಲಿ ಮುಂದುವರೆಸಲಾದ ಕಛೇರಿ ಹಾಗೂ ಹಣ ಸೆಳೆಯುವ ಮತ್ತು ವಿತರಿಸುವ ಅಧಿಕಾರಿ (Drawing & Disbursing Officer) | ನಿಯಂತ್ರಣಕ್ಕೊಳಪಡಿಸಲಾದ ಕಛೇರಿ |
|---|---|---|---|---|---|---|
| 1 | ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆ, ಮೈಸೂರು | ಕ್ಷೇತ್ರ ಅಧೀಕ್ಷಕರು (ಮೀ.ಸ.ನಿ(ಶ್ರೇಣಿ-2)), ಮೀನುಮರಿ ಉತ್ಪಾದನಾ ಕೇಂದ್ರ, ಕರಿಮುದ್ದನಹಳ್ಳಿ ಮೀನುಗಾರಿಕೆ ಕ್ಷೇತ್ರಪಾಲಕರು | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಮೀನುಮರಿ ಉತ್ಪದನಾ ಕೇಂದ್ರ, ಕರಿಮುದ್ದನಹಳ್ಳಿ ಮೀನುಗಾರಿಕೆ ಕ್ಷೇತ್ರಪಾಲಕರು | 01<br>02 | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಮೀನುಮರಿ ಉತ್ಪಾದನಾ ಕೇಂದ್ರ, ಕರಿಮುದ್ದನಹಳ್ಳಿ | ಮೀನುಗಾರಿಕೆ ಉಪ ನಿರ್ದೇಶಕರು, ಮೈಸೂರು |

| | | | | | | |
|---|---|---|---|---|---|---|
| 2 | ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆ, ಮಂಡ್ಯ | ಕ್ಷೇತ್ರ ಅಧೀಕ್ಷಕರು (ಮೀ.ಸ.ನಿ(ಶ್ರೇಣಿ-2)), ಮೀನುಮರಿ ಉತ್ಪಾದನಾ ಕೇಂದ್ರ, ಹೊಸಬುದನೂರು<br>ಮೀನುಗಾರಿಕೆ ಕ್ಷೇತ್ರಪಾಲಕರು<br>ವಾಹನ ಚಾಲಕರು<br>ಕಛೇರಿ ಸೇವಕರು | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2)), ಮೀನುಮರಿ ಉತ್ಪಾದನಾ ಕೇಂದ್ರ, ಹೊಸಬುದನೂರು<br>ಮೀನುಗಾರಿಕೆ ಕ್ಷೇತ್ರಪಾಲಕರು<br>ವಾಹನ ಚಾಲಕರು<br>ಕಛೇರಿ ಸೇವಕರು | 01<br>02<br>01<br>01 | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಮೀನುಮರಿ ಉತ್ಪಾದನಾ ಕೇಂದ್ರ, ಹೊಸಬುದನೂರು | ಮೀನುಗಾರಿಕೆ ಉಪ ನಿರ್ದೇಶಕರು, ಮೈಸೂರು |
| 3 | ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆ ಹಾಸನ | ಕ್ಷೇತ್ರ ಅಧೀಕ್ಷಕರು (ಮೀ.ಸ.ನಿ(ಶ್ರೇಣಿ-2)), ಮೀನುಮರಿ ಉತ್ಪಾದನಾ ಕೇಂದ್ರ, ಶ್ರೀ ರಾಮದೇವರ ಕಟ್ಟೆ<br>ಮೀನುಗಾರಿಕೆ ಕ್ಷೇತ್ರಪಾಲಕರು | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2)), ಮೀನುಮರಿ ಉತ್ಪಾದನಾ ಕೇಂದ್ರ, ಶ್ರೀ ರಾಮದೇವರ ಕಟ್ಟೆ<br>ಮೀನುಗಾರಿಕೆ ಕ್ಷೇತ್ರಪಾಲಕರು | 01<br>**02** | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಮೀನುಮರಿ ಉತ್ಪಾದನಾ ಕೇಂದ್ರ, ಶ್ರೀರಾಮದೇವರ ಕಟ್ಟೆ | ಮೀನುಗಾರಿಕೆ ಉಪ ನಿರ್ದೇಶಕರು, ಮೈಸೂರು |
| 4 | ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆ ಶಿವಮೊಗ್ಗ | ಕ್ಷೇತ್ರ ಅಧೀಕ್ಷಕರು (ಮೀ.ಸ.ನಿ(ಶ್ರೇಣಿ-2)), ಮೀನುಮರಿ ಉತ್ಪಾದನಾ ಕೇಂದ್ರ, ಗಾಜನೂರು<br>ಮೀನುಗಾರಿಕೆ ಕ್ಷೇತ್ರಪಾಲಕರು | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2)), ಮೀನುಮರಿ ಉತ್ಪಾದನಾ ಕೇಂದ್ರ, ಗಾಜನೂರು<br>ಮೀನುಗಾರಿಕೆ ಕ್ಷೇತ್ರಪಾಲಕರು | **01**<br>**02** | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಮೀನುಮರಿ ಉತ್ಪಾದನಾ ಕೇಂದ್ರ, ಗಾಜನೂರು | ಮೀನುಗಾರಿಕೆ ಉಪ ನಿರ್ದೇಶಕರು, ಶಿವಮೊಗ್ಗ |
| 5 | ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆ, ಬೆಂಗಳೂರು | ಕ್ಷೇತ್ರ ಅಧೀಕ್ಷಕರು (ಮೀ.ಸ.ನಿ(ಶ್ರೇಣಿ-2)), ಮೀನುಮರಿ ಉತ್ಪಾದನಾ ಕೇಂದ್ರ, ಕಣ್ವ<br>ಮೀನುಗಾರಿಕೆ ಕ್ಷೇತ್ರಪಾಲಕರು<br>ವಾಹನಚಾಲಕರು<br>ಕಛೇರಿ ಸೇವಕರು | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಮೀನುಮರಿ ಉತ್ಪಾದನಾ ಕೇಂದ್ರ, ಕಣ್ವ ಮೀನುಗಾರಿಕೆ ಕ್ಷೇತ್ರಪಾಲಕರು<br>(ವಾಹನ ಚಾಲಕರು ವಾಹನದೊಂದಿಗೆ)<br>ಕಛೇರಿ ಸೇವಕರು | **01**<br>**02**<br>**01**<br>**01** | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ಮೀನುಮರಿ ಉತ್ಪಾದನಾ ಕೇಂದ್ರ, ಕಣ್ವ | ಮೀನುಗಾರಿಕೆ ಉಪ ನಿರ್ದೇಶಕರು, ಬೆಂಗಳೂರು |
| 6 | ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆ, ಕೋಲಾರ | ಕ್ಷೇತ್ರ ಅಧೀಕ್ಷಕರು (ಮೀ.ಸ.ನಿ(ಶ್ರೇಣಿ-2)), ಮೀನುಮರಿ ಉತ್ಪಾದನಾ ಕೇಂದ್ರ, ಮಾರ್ಕಂಡೇಯ<br>ಮೀನುಗಾರಿಕೆ ಕ್ಷೇತ್ರಪಾಲಕರು ವಾಹನ ಚಾಲಕರು ಕಛೇರಿ ಸೇವಕರು | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಮೀನುಮರಿ ಉತ್ಪಾದನಾ ಕೇಂದ್ರ, ಮಾರ್ಕಂಡೇಯಮೀನುಗಾರಿಕೆ ಕ್ಷೇತ್ರಪಾಲಕರು<br>(ವಾಹನ ಚಾಲಕರು ವಾಹನದೊಂ ದಿಗೆ)<br>ಕಛೇರಿ ಸೇವಕರು | **01**<br>**02**<br>**01**<br>**01** | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ಮೀನುಮರಿ ಉತ್ಪಾದನಾ ಕೇಂದ್ರ, ಮಾರ್ಕಂಡೇಯ | ಮೀನುಗಾರಿಕೆ ಉಪ ನಿರ್ದೇಶಕರು, ಬೆಂಗಳೂರು |

